# ಚಾಂದ್‌ಬೀಬಿ: ಚಾರಿತ್ರಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ


ಸಂಶೋಧಕ
ಸಂತೋಷಕುಮಾರ





ಮಾರ್ಗದರ್ಶಕರು
ಡಾ. ಕೆ. ಮೋಹನ್‌ಕೃಷ್ಣ ರೈ
ಸಹ ಪ್ರಾಧ್ಯಾಪಕರು





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೯-೨೦೧೦

# ಚಾಂದ್‌ಬೀಬಿ: ಚಾರಿತ್ರಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ


ಸಂಶೋಧಕ
**ಸಂತೋಷಕುಮಾರ**

ಮಾರ್ಗದರ್ಶಕರು
**ಡಾ. ಕೆ. ಮೋಹನ್‌ಕೃಷ್ಣ ರೈ**
ಸಹ ಪ್ರಾಧ್ಯಾಪಕರು





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೯-೨೦೧೦

# ದೃಢೀಕರಣ ಪತ್ರ

''ಚಾಂದ್‌ಬೀಬಿ: ಚಾರಿತ್ರಿಕ ಅಧ್ಯಯನ'' ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗದ ಎಂ.ಫಿಲ್. ಪದವಿಗಾಗಿ ಸಂತೋಷಕುಮಾರ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೫.೦೯.೨೦೧೦

(ಡಾ. ಕೆ. ಮೋಹನ್‌ಕೃಷ್ಣ ರೈ)
ಮಾರ್ಗದರ್ಶಕರು ಹಾಗೂ ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

''ಚಾಂದ್‌ಬೀಬಿ: ಚಾರಿತ್ರಿಕ ಅಧ್ಯಯನ''' ಎಂಬ ನಿಬಂಧವನ್ನು ಡಾ.ಕೆ. ಮೋಹನ್‌ಕೃಷ್ಣ ರೈ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ, ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೫.೦೯.೨೦೧೦

(ಸಂತೋಷಕುಮಾರ)
ಸಂಶೋಧನಾ ವಿದ್ಯಾರ್ಥಿ, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಚಾಂದ್‌ಬೀಬಿ: ಚಾರಿತ್ರಿಕ ಅಧ್ಯಯನ

## ಪರಿವಿಡಿ



* * *

## ಅಧ್ಯಾಯ ಒಂದು

# ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವಿಧಾನ ಹಾಗೂ ಅಧ್ಯಯನದ ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವಿಧಾನ

೧.೩. ಅಧ್ಯಯನದ ಸ್ವರೂಪ

# ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವಿಧಾನ ಹಾಗೂ ಅಧ್ಯಯನದ ಸ್ವರೂಪ

## ಪ್ರಸ್ತಾವನೆ

ಚರಿತ್ರೆಯನ್ನು ಅರಸಕೇಂದ್ರಿತ ನೆಲೆಯಲ್ಲಿಯೆ ಹೆಚ್ಚಾಗಿ ಅಧ್ಯಯನಕ್ಕೆ ಒಳಪಡಿಸಿದ್ದರಿಂದಾಗಿ ಸಮಾಜ ಹಾಗೂ ಆರ್ಥಿಕತೆಗೆ ಸಂಬಂಧಿಸಿದ ಹಲವಾರು ವಿಚಾರಗಳು ನಿರ್ಲಕ್ಷ್ಯಕ್ಕೆ ಒಳಗಾಗಬೇಕಾಗಿ ಬಂತು. ಅಂದರೆ ಸಾಮ್ರಾಜ್ಯದ ಉದಯ, ಸಾಮ್ರಾಜ್ಯದ ಸ್ಥಾಪನೆ, ಅರಸರ ವ್ಯಕ್ತಿತ್ವ, ಅರಸರ ಸಾಧನೆಗಳು, ವಂಶಾವಳಿಗಳ ಕಾಲಾನುಕ್ರಮಗಳು, ಮಂತ್ರಿಮಂಡಲ, ಸಾಮ್ರಾಜ್ಯದ ವಿಸ್ತರಣೆ ಮತ್ತು ರಾಣಿಯರ ವೈಭವೀಕರಣಕ್ಕೆ ಸೀಮಿತವಾಗಿದೆ. ಚರಿತ್ರೆಯನ್ನು ಜನಮುಖಿ ನೆಲೆಯಲ್ಲಿ ನೋಡುವ ಪ್ರಯತ್ನಗಳು ಅಷ್ಟಾಗಿ ನಡೆಯಲಿಲ್ಲ. ಚರಿತ್ರೆಯನ್ನು ವೈಭವದ ಚೌಕಟ್ಟಿನಿಂದ ಹೊರತಂದಾಗ ಮಾತ್ರ ಆಯಾ ಸಂದರ್ಭದ ರಾಜಕಾರಣ, ಸಮಾಜ ಹಾಗೂ ಆರ್ಥಿಕತೆಯ ವಾಸ್ತವ ವಿಚಾರಗಳು ಬೆಳಕಿಗೆ ಬರಲು ಸಾಧ್ಯ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು, ಚರಿತ್ರೆಯ ಬದಲಾದ ಅಧ್ಯಯನ ವಿಧಾನ ಹಾಗೂ ಸೈದ್ಧಾಂತಿಕತೆಯ ಮೂಲಕ ಚಾಂದ್‌ಬೀಬಿಯ ರಾಜಕೀಯ ಸಂದರ್ಭವನ್ನು ವಿಶ್ಲೇಷಿಸುವ ಪ್ರಯತ್ನವನ್ನು ನಿಬಂಧದಲ್ಲಿ ಮಾಡಲಾಗಿದೆ.

ಚರಿತ್ರೆಯ ವ್ಯಾಪ್ತಿ ವಿಶಾಲವಾಗಿದ್ದರೂ ಕೆಲವು ವಿದ್ವಾಂಸರು ಚರಿತ್ರೆಯ ಚೌಕಟ್ಟನ್ನು ನಿರ್ಧರಿಸಲು ಪ್ರಯತ್ನಿಸಿದ್ದಾರೆ. ಅಂತವರಲ್ಲಿ ಹೆರೋಡೊಟಸ್, ಅರಿಸ್ಟಾಟಲ್, ಥಾಮಸ್ ಕಾರ್ಲೈಲ್ ಮುಂತಾದವರು ಪ್ರಮುಖರಾಗಿದ್ದಾರೆ. ಇತಿಹಾಸದ ಪಿತಾಮಹನಾದ ಹೆರೋಡೊಟಸ್‌ನು ಚರಿತ್ರೆಯನ್ನು ''ಮಹಾನ್ ವೀರರ ಕಥಾನಕ'' ಎಂದು ವ್ಯಾಖ್ಯಾನಿಸಿದ್ದಾನೆ. ಮತ್ತೊಬ್ಬ ಇತಿಹಾಸಕಾರ ಥಾಮಸ್ ಕಾರ್ಲೈಲ್ ''ಶ್ರೇಷ್ಠ ವ್ಯಕ್ತಿಗಳ ಆತ್ಮಕಥನವೇ ಇತಿಹಾಸ'' ಎಂದಿದ್ದಾನೆ. ಅಂದರೆ ಒಬ್ಬ ವ್ಯಕ್ತಿಯಲ್ಲಿರುವ ನಾಯಕತ್ವದ ಗುಣಗಳು, ಹೋರಾಟದ ದಾರಿಗಳು, ಪ್ರಗತಿಪರ ಕಾರ್ಯಗಳು, ಅವರಲ್ಲಿರುವ ಚಿಂತನೆಗಳ ಫಲವಾಗಿ ಉಂಟಾಗುವ ಬದಲಾವಣೆಗಳೇ ಐತಿಹಾಸಿಕ ಘಟನೆಗಳು ಸಂಭವಿಸಲು ಕಾರಣಗಳಾಗಿವೆ. ಉದಾಹರಣೆಗೆ ದೆಹಲಿಯ ರಜಿಯಾ ಸುಲ್ತಾನಳ ವ್ಯಕ್ತಿತ್ವ. ಅವಳು ಸಾಮ್ರಾಜ್ಯದ ಉಳಿವಿಗಾಗಿ ನಡೆಸಿದ ಹೋರಾಟಗಳು, ಸೈನ್ಯ ಸಂಘಟನೆಯ ಶಕ್ತಿ ವೈರಿಗಳನ್ನು ದಮನ ಮಾಡುವ ನೀತಿ ಮೊದಲಾದವು ಅವಳಿಗೆ ವಿಶಿಷ್ಟ ಸ್ಥಾನವನ್ನು ತಂದುಕೊಟ್ಟಿವೆ.

ಮಧ್ಯಕಾಲೀನ ದಕ್ಷಿಣ ಭಾರತದ ಇತಿಹಾಸದಲ್ಲಿ ಮಿಂಚಿ ಮರೆಯಾದ ಅನೇಕ ಮಹಿಳೆಯರಲ್ಲಿ ಚಾಂದ್‌ಬೀಬಿಯೂ ಒಬ್ಬಳು. ಚಾಂದ್‌ಬೀಬಿಯು ಅಹಮದನಗರದ ಒಂದನೇ ಹುಸೇನ ನಿಜಾಮ ಷಾಹ ಮತ್ತು ಖೂನ್‌ಜಾ ಹುಮಾಯಾನ್ ದಂಪತಿಗಳಿಗೆ ಮಗಳಾಗಿ ಜನಿಸಿದಳು. ಇವಳಿಗೆ ಮುರ್ತಜಾ ಹಾಗೂ ಎರಡನೆ

ಬುರ್ಹಾನ್ ಎಂಬ ಇಬ್ಬರು ಸಹೋದರರು ಇದ್ದರು. ಚಾಂದ್‌ಬೀಬಿಯು ಅಹಮದನಗರದ ನಿಜಾಮಷಾಹಿ ಮನೆತನದಲ್ಲಿ ಜನಿಸಿದ್ದರಿಂದ, ಅವಳಿಗೆ ಬಾಲ್ಯದಲ್ಲಿ ಶಿಕ್ಷಣ ವ್ಯವಸ್ಥೆ ಕಲ್ಪಿಸಲಾಯಿತು. ಅವಳು ಬಹುಬೇಗನೆ ತುರ್ಕಿ, ಪರ್ಶಿಯನ್ ಮತ್ತು ಅರೇಬಿಕ್ ಭಾಷೆಗಳನ್ನು ಕಲಿತಳು. ಅಷ್ಟೇ ಅಲ್ಲದೆ ಆ ಭಾಷೆಗಳಲ್ಲಿ ಸ್ಪಷ್ಟವಾಗಿ ಮಾತನಾಡುತ್ತಿದ್ದಳು. ಚಾಂದ್‌ಬೀಬಿಗೆ ವೀಣೆ ನುಡಿಸುವುದರಲ್ಲಿ ಮತ್ತು ಚಿತ್ರಕಲೆಯಲ್ಲಿ ಅಪಾರ ಅಭಿರುಚಿ ಇತ್ತು. ಚಾಂದ್‌ಬೀಬಿಯು ತನ್ನ ಸಹೋದರರ ಜೊತೆಗೆ ಯುದ್ಧದ ತರಬೇತಿಯನ್ನು ಪಡೆದುಕೊಂಡಿದ್ದಳು. ಅವಳು ಕುದುರೆ ಸವಾರಿ, ಕತ್ತಿ ವರಸೆ ಹಾಗೂ ಯುದ್ಧದ ರಣತಂತ್ರ ರೂಪಿಸುವುದನ್ನು ಕರಗತ ಮಾಡಿಕೊಂಡಿದ್ದಳು. ಅಷ್ಟೇ ಅಲ್ಲದೆ ರಾಜ್ಯದ ಆಡಳಿತವನ್ನು ಸುವ್ಯವಸ್ಥೆಯಾಗಿ ನಡೆಸಿಕೊಂಡು ಹೋಗುವ ರಾಜನೀತಿಯ ಬಗ್ಗೆ ಅರಿತುಕೊಂಡಿದ್ದಳು. ಚಾಂದ್‌ಬೀಬಿಯು ನೋಡಲು ಅಸಾಮಾನ್ಯ ಸೌಂದರ್ಯವತಿಯಾಗಿದ್ದು, ಅವಳು ಯಾವಾಗಲೂ ಅಂದವಾದ ವಸ್ತ್ರಗಳನ್ನು ಧರಿಸುತ್ತಿದ್ದಳು ಮತ್ತು 'ಜೇನು ಬೀಗದ' ಅಶ್ವದ ಸವಾರಿಯನ್ನು ಮಾಡುತ್ತಿದ್ದಳು ಎಂಬುದಾಗಿ ದಾಖಲೆಗಳು ತಿಳಿಸುತ್ತವೆ.

ಕ್ರಿ.ಶ. ೧೫೫೮ರಿಂದ ೧೫೬೪ರವರೆಗೆ ಬಿಜಾಪುರದ ಆದಿಲ್‌ಷಾಹಿ ಮತ್ತು ಅಹಮದನಗರದ ಹುಸೇನ್ ನಿಜಾಮಷಾಹನೊಂದಿಗೆ ನಿರಂತರ ಯುದ್ಧಗಳು ನಡೆಯುತ್ತಿದ್ದವು. ಈ ಯುದ್ಧಗಳನ್ನು ಅಂತ್ಯಗೊಳಿಸಲು ಹುಸೇನ್ ನಿಜಾಮಷಾಹನು ಬಿಜಾಪುರದ ಅಲಿ ಆದಿಲ್‌ಷಾಹನಿಗೆ ಅವಳ ವಿವಾಹವನ್ನು ಪ್ರಸ್ತಾಪಿಸಿದನು. ಅಲಿ ಆದಿಲ್‌ಷಾಹನು ಅದಕ್ಕೆ ಒಪ್ಪಿಗೆ ನೀಡಿದನು. ಅದರಂತೆ ಹುಸೇನ್ ನಿಜಾಮಷಾಹನ ಮಗಳು ಚಾಂದ್‌ಬೀಬಿಯನ್ನು ಅಲಿ ಆದಿಲ್‌ಷಾಹನಿಗೆ ಹಾಗೂ ಅಲಿ ಆದಿಲ್‌ಷಾಹನ ಸಹೋದರಿಯಾದ ಬೀಬಿಹದಿಯಾ ಸುಲ್ತಾಳನ್ನು ಹುಸೇನ್ ನಿಜಾಮಷಾಹನ ಮಗ ಮುರ್ತುಜಾನಿಗೆ ಕೊಡುವ ಒಪ್ಪಂದ ಮಾಡಿಕೊಂಡರು. ಒಪ್ಪಂದದಂತೆ ೧೫೬೪ರಲ್ಲಿ ಎರಡು ಮದುವೆಗಳು ವಿಜೃಂಭಣೆಯಿಂದ ನಡೆದವು. ಚಾಂದ್‌ಬೀಬಿಯು ಮದುವೆಯ ನಂತರ ತನ್ನ ಗಂಡನ ಜೊತೆಗೆ ಆಡಳಿತದ ಸಭೆಗಳಲ್ಲಿ ಭಾಗವಹಿಸುತ್ತಿದ್ದಳು. ಅಲಿ ಆದಿಲ್‌ಷಾಹನು ವೈರಿಗಳ ಜೊತೆಗೆ ಯುದ್ಧದಲ್ಲಿ ತೊಡಗಿದ ಸಮಯದಲ್ಲಿ ಚಾಂದ್‌ಬೀಬಿಯು ಬಿಜಾಪುರದ ಸುಲ್ತಾನನ ಪ್ರತಿನಿಧಿಯಾಗಿ ರಾಜ್ಯದ ಆಡಳಿತವನ್ನು ಸುವ್ಯವಸ್ಥೆಯಾಗಿ ನಡೆಸಿಕೊಂಡು ಹೋಗುತ್ತಿದ್ದಳು. ಅವಳು ಕೂಡ ಕೆಲವೊಂದು ಸಂದರ್ಭದಲ್ಲಿ ಯುದ್ಧದಲ್ಲಿ ಪಾಲ್ಗೊಳ್ಳುತ್ತಿದ್ದಳು. ''ಹುಕ್ಕೇರಿ ಯುದ್ಧ''ದಲ್ಲಿ ವೈರಿಗಳಿಗೆ ಚಾಂದ್‌ಬೀಬಿಯು ಸಿಂಹಸ್ವಪ್ನವಾಗಿದ್ದಳು.

ಕ್ರಿ.ಶ. ೧೫೮೦ರಲ್ಲಿ ಒಂದನೇ ಅಲಿ ಆದಿಲ್‌ಷಾಹನು ಮರಣ ಹೊಂದಿದನು. ಅವನಿಗೆ ಮಕ್ಕಳಿಲ್ಲದ ಕಾರಣ ಚಾಂದ್‌ಬೀಬಿಯು ಅವನ ಸಹೋದರನ ಮಗನಾದ ಎರಡನೇ ಇಬ್ರಾಹಿಂನನ್ನು ಸುಲ್ತಾನನಾಗಿ ನೇಮಕ ಮಾಡಿದಳು. ಅವನು ಇನ್ನೂ ಬಾಲಕನಾಗಿದ್ದ ಕಾರಣ ಸುಲ್ತಾನನ ಪ್ರತಿನಿಧಿಯಾಗಿ ಎಲ್ಲ ಅಧಿಕಾರವನ್ನು ತನ್ನ ಹತೋಟಿಗೆ ತೆಗೆದುಕೊಂಡು ಆಡಳಿತವನ್ನು ಸುವ್ಯವಸ್ಥೆಯಿಂದ ನಡೆಸತೊಡಗಿದಳು. ಇವಳ ಆಡಳಿತದ ಸಂದರ್ಭದಲ್ಲಿ ಅಫಕಿ ಮತ್ತು ದಖನಿ ಅಧಿಕಾರಿಗಳ ಮಧ್ಯೆ ಅಧಿಕಾರಕ್ಕಾಗಿ ದಂಗೆಗಳು ಪ್ರಾರಂಭವಾದವು. ಅವರು ಚಾಂದ್‌ಬೀಬಿ ಮತ್ತು ಅವಳ ಕುಟುಂಬದ ವಿರುದ್ಧ ಒಳಸಂಚು ರೂಪಿಸುತ್ತಿದ್ದರು. ಇದರಿಂದ ರಾಜ್ಯದಲ್ಲಿ ಅಶಾಂತಿ ಉಂಟಾಗಿ ನೆರೆ ರಾಜ್ಯಗಳು ಗಡಿ ಪ್ರದೇಶದ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡವು. ಚಾಂದ್‌ಬೀಬಿಯು

ಚಾಣಾಕ್ಷತನದಿಂದ ಎರಡು ಪಕ್ಷದ ಅಧಿಕಾರಿಗಳಿಗೆ ಸಲಹೆ ನೀಡುವುದರ ಮೂಲಕ ರಾಜ್ಯದಲ್ಲಿ ಶಾಂತಿ ಕಾಪಾಡಿಕೊಂಡು ಹೋಗುವಲ್ಲಿ ಯಶಸ್ವಿಯಾಗಿದ್ದಳು.

ಚಾಂದ್‌ಬೀಬಿಯ ಆಡಳಿತ ಅವಧಿಯಲ್ಲಿ ಅಹಮದನಗರ ಮತ್ತು ಬಿಜಾಪುರದ ಎರಡು ರಾಜ್ಯಗಳ ಮಧ್ಯೆ ಗಡಿ ಸಮಸ್ಯೆಯಿಂದಾಗಿ ಯುದ್ಧಗಳು ಪ್ರಾರಂಭಗೊಂಡವು. ಈ ಎರಡು ರಾಜ್ಯಗಳ ಮಧ್ಯದ ದ್ವೇಷವನ್ನು ನಂದಿಸಲು ಚಾಂದ್‌ಬೀಬಿಯ ರೀಜೆಂಟನಾದ ದಿವಾವರಖಾನನು ಅಹಮದನಗರ ಮತ್ತು ಗೋಲ್ಕೊಂಡದ ರಾಜ್ಯಗಳ ಜೊತೆಗೆ ವೈವಾಹಿಕ ಸಂಬಂಧ ಬೆಳೆಸಲು ಅವರೊಂದಿಗೆ ಚರ್ಚಿಸಿದನು. ಅವರು ಕೂಡ ಸಂತೋಷದಿಂದ ಒಪ್ಪಿಗೆ ನೀಡಿದರು. ಅದರಂತೆ ಬಿಜಾಪುರದ ಎರಡನೇ ಇಬ್ರಾಹಿಂನ ಸಹೋದರಿಯಾದ ಖದೀಜಾ ಸುಲ್ತಾನಗಳ ಮತ್ತು ಅಹಮದನಗರದ ಮುರ್ತುಜಾ ನಿಜಾಮಷಾಹನ ಮಗ ಮಿರ್‍ಕೈನ್ ನಿಜಾಮ ಷಾಹನೊಂದಿಗೆ ಹಾಗೂ ಗೋಲ್ಕೊಂಡದ ಕುಲಿ ಕುತಬಷಾಹನ ಮಗಳಾದ ಚಾಂದ್‌ಬೀಬಿಯೊಂದಿಗೆ ಬಿಜಾಪುರದ ಎರಡನೇ ಇಬ್ರಾಹಿಂನ ಜೊತೆಗೆ ಮದುವೆಯ ಒಪ್ಪಂದ ಮಾಡಿಕೊಂಡರು. ಅದರ ಪ್ರಕಾರ ಎರಡು ಮದುವೆಗಳು ವಿಜೃಂಭಣೆಯಿಂದ ನಡೆದವು. ಈ ವೈವಾಹಿಕ ಸಂಬಂಧಗಳಿಂದ ಬಿಜಾಪುರ, ಅಹಮದನಗರ ಮತ್ತು ಗೋಲ್ಕೊಂಡ ಷಾಹಿ ರಾಜ್ಯಗಳ ಮಧ್ಯೆ ನಡೆಯುತ್ತಿದ್ದ ಯುದ್ಧಗಳು ಸ್ವಲ್ಪ ಸಮಯದವರೆಗೆ ಸ್ಥಗಿತಗೊಂಡವು.

ಬಿಜಾಪುರದಲ್ಲಿ ಅಧಿಕಾರ ಕ್ಷೀಣಿಸುತ್ತಿರುವುದನ್ನು ಗಮನಿಸಿ, ಚಾಂದ್‌ಬೀಬಿಯು ತರುಣ ಸುಲ್ತಾನನನ್ನು ಸರಿಯಾದ ರೀತೀಯಲ್ಲಿ ಬೆಳೆಸಿ, ಅವನಿಗೆ ತರಬೇತಿ ನೀಡಿದಳು. ಮುಂದಿನ ಜೀವನದಲ್ಲಿ ಅವನು ಜಾಗರೂಕತೆಯಿಂದ ಬದುಕಲು ಅನುಕೂಲ ಮಾಡಿಕೊಡುವ ಉದ್ದೇಶವನ್ನು ಹೊಂದಿದ್ದಳು. ಈ ಕಾರ್ಯವನ್ನು ಪೂರೈಸಿದ ಚಾಂದ್‌ಬೀಬಿಗೆ ತನ್ನ ಪ್ರತಿಭೆಯನ್ನು ವ್ಯಕ್ತಪಡಿಸಲು ಬಿಜಾಪುರವು ಸರಿಯಾದ ಸ್ಥಳವಲ್ಲ ಎಂದು ಗ್ರಹಿಸಿಕೊಂಡು ತನ್ನ ತವರು ಮನೆಯಾದ ಅಹಮದನಗರವೇ ಸರಿ ಎಂದು ಭಾವಿಸಿ ಇತ್ತೀಚೆಗೆ ಮೀರ್‍ಕೈನ್ ಹುಸೇನನನ್ನು ಮದುವೆಯಾದ ಖದೀಜಾ ಸುಲ್ತಾನಳ ಸಂಗಡ ಹೋಗುವ ನೆಪದಿಂದ ಅಹಮದನಗರಕ್ಕೆ ಹೋದಳು.

ಚಾಂದ್‌ಬೀಬಿಯು ಬಿಜಾಪುರದಿಂದ ಅಹಮದನಗರಕ್ಕೆ ಬಂದಿದ್ದ ಸಂದರ್ಭದಲ್ಲಿ ಅಲ್ಲಿನ ಆಡಳಿತದಲ್ಲಿ ಸಿಂಹಾಸನಕ್ಕಾಗಿ ಹೋರಾಟಗಳು ನಡೆಯುತ್ತಿದ್ದವು. ಇದರಿಂದ ರಾಜ್ಯದಲ್ಲಿ ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಂಡಿದ್ದವು. ಇದರ ಪರಿಣಾಮದಿಂದ ಉತ್ತರ ಭಾರತದ ಮೊಗಲ್ ಸಾಮ್ರಾಜ್ಯ ದಕ್ಷಿಣದ ಮೇಲೆ ದಾಳಿ ಮಾಡಲು ಹೊಂಚು ಹಾಕುತ್ತಿತ್ತು. ಈ ಎಲ್ಲ ಘಟನೆಗಳನ್ನು ಗಮನಿಸುತ್ತಿದ್ದ ಪ್ರಗತಿಪರ ಮಂತ್ರಿಗಳು ಮತ್ತು ಅಧಿಕಾರಿಗಳು ಚಾಂದ್‌ಬೀಬಿಗೆ ಅಹಮದನಗರದ ಆಡಳಿತದ ಚುಕ್ಕಾಣಿ ವಹಿಸಿಕೊಳ್ಳಲು ಕೋರಿಕೊಂಡರು. ಅವರ ಕೋರಿಕೆಯ ಮೇರೆಗೆ ಚಾಂದ್‌ಬೀಬಿಯು ಕ್ರಿ.ಶ. ೧೫೮೪ರಲ್ಲಿ ಅಹಮದನಗರದ ರಾಜಕೀಯ ಪ್ರವೇಶ ಮಾಡುತ್ತಾಳೆ. ಅಲ್ಲಿನ ಸುಲ್ತಾನನಾದ ಇಬ್ರಾಹಿಂ ನಿಜಾಮಷಾಹನು ಮರಣ ಹೊಂದಿದ್ದರಿಂದಾಗಿ, ಅವನ ಮಗನಾದ ಬಹದೂರನನ್ನು ನ್ಯಾಯಬದ್ಧ ಉತ್ತರಾಧಿಕಾರಿಯೆಂದು ಘೋಷಿಸಿ, ಅವನ ಹಕ್ಕನ್ನು ಸಮರ್ಥಿಸಿದಳು. ಸುಲ್ತಾನನು ಇನ್ನೂ ಬಾಲಕನಾಗಿದ್ದ ಕಾರಣದಿಂದ ಸುಲ್ತಾನನ ಪ್ರತಿನಿಧಿಯಾಗಿ ಚಾಂದ್‌ಬೀಬಿಯು ಅಧಿಕಾರವನ್ನು ವಹಿಸಿಕೊಂಡಳು.

ಚಾಂದ್‌ಬೀಬಿಯು ಬಿಜಾಪುರ ಮತ್ತು ಅಹಮದನಗರ ರಾಜ್ಯಗಳಲ್ಲಿ ಆಳ್ವಿಕೆ ನಡೆಸಿದ ಬಗೆ ಹಾಗೂ ಅಲ್ಲಿನ ರಾಜಕೀಯ ಗೊಂದಲವನ್ನು ನಿವಾರಿಸಿ ಆಡಳಿತವನ್ನು ವ್ಯವಸ್ಥಿತಗೊಳಿಸಲು ನಡೆಸಿದ ಪ್ರಯತ್ನಗಳನ್ನು ಪ್ರಸ್ತುತ ನಿಬಂಧದಲ್ಲಿ ಚರ್ಚಿಸಲಾಗಿದೆ. ಚಾಂದ್‌ಬೀಬಿಗೆ ಎದುರಾದ ಸಮಸ್ಯೆಗಳು, ಆಂತರಿಕ ಹಾಗೂ ಬಾಹ್ಯ ಸಂಘರ್ಷಗಳನ್ನು ಎದುರಿಸುತ್ತಲೇ ತನ್ನ ಅಂತ್ಯವನ್ನು ಕಾಣಬೇಕಾದ ಪರಿಸ್ಥಿತಿ ಎದುರಾದ ಬಗೆಗಳನ್ನು ಸೂಕ್ಷ್ಮವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಯನದ ಉದ್ದೇಶ**

ಪ್ರಸ್ತುತ ಅಧ್ಯಯನದಲ್ಲಿ ಚಾಂದ್‌ಬೀಬಿಯ 'ಜೀವನ ಹಾಗೂ ಸಾಧನೆ' ಕುರಿತು ಸಂಶೋಧನೆ ಮಾಡುವ ಉದ್ದೇಶವನ್ನು ಹೊಂದಲಾಗಿದೆ. ಚಾಂದ್‌ಬೀಬಿಯ ಧೈರ್ಯ, ಸಾಹಸ, ಸಹನೆ, ಚಾಣಾಕ್ಷತನ ಹಾಗೂ ಆಂತರಿಕ ಮತ್ತು ಬಾಹ್ಯ ಸಮಸ್ಯೆಗಳನ್ನು ಎದುರಿಸಿದ ಪ್ರಸಂಗಗಳನ್ನು ವಿವರಿಸಲಾಗಿದೆ.

ಚಾಂದ್‌ಬೀಬಿಯ ಆಡಳಿತದಲ್ಲಿ ಕೆಲವರು ದುಷ್ಟ ಮಂತ್ರಿಗಳು ನೋಬೆಲ್(ಶ್ರೀಮಂತ ವರ್ಗದವರ)ರು ಚಾಂದ್‌ಬೀಬಿಯ ವಿರುದ್ಧ ಮತ್ತು ಅವಳ ಕುಟುಂಬದ ವಿರುದ್ಧ ಒಳಸಂಚು ಮಾಡುತ್ತಿದ್ದರು. ಇವರು ಚಾಂದ್‌ಬೀಬಿಯನ್ನು ಅಧಿಕಾರದಿಂದ ವಜಾಗೊಳಿಸುವ ಉದ್ದೇಶ ಹೊಂದಿದ್ದರು. ಆದರೆ ಚಾಂದ್‌ಬೀಬಿಯು ತನ್ನ ಚಾಣಾಕ್ಷತನದಿಂದ ಅವರ ಪ್ರಯತ್ನವನ್ನು ವಿಫಲಗೊಳಿಸಿ, ಅವರಿಗೆ ಶಿಕ್ಷೆಯನ್ನು ನೀಡಿದಳು. ಚಾಂದ್‌ಬೀಬಿಯ ರಾಜಕೀಯ ಕ್ರಮಗಳ ಬಗ್ಗೆ ತಿಳಿಸುವ ಉದ್ದೇಶವನ್ನು ಈ ಅಧ್ಯಯನ ಒಳಗೊಂಡಿದೆ.

ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಪ್ರಮುಖವಾದ ಮೊಗಲ್ ಸಾಮ್ರಾಜ್ಯದ ಶ್ರೇಷ್ಠ ಸುಲ್ತಾನನಾದ ಅಕ್ಬರನು ದಕ್ಷಿಣ ಭಾರತದ ಮೇಲೆ ತನ್ನ ಪ್ರಭುತ್ವ ಸಾಧಿಸಲು ಪ್ರಯತ್ನಿಸಿದನು. ಅದರಂತೆ ತನ್ನ ಮಗ ಮುರಾದನನ್ನು ಬಲಿಷ್ಠ ಸೈನ್ಯದೊಂದಿಗೆ ದಕ್ಷಿಣ ಭಾರತದ ಷಾಹಿ ರಾಜ್ಯಗಳನ್ನು ವಶಪಡಿಸಿಕೊಳ್ಳಲು ಕಳುಹಿಸಿದನು. ಮೊದಲಿಗೆ ಅಹಮದನಗರದ ಮೇಲೆ ದಾಳಿ ಮಾಡಿದನು.

ಅಲ್ಲಿ ಅವನ ವಿರುದ್ಧ ಚಾಂದ್‌ಬೀಬಿಯು ಸಂಘರ್ಷ ನಡೆಸುತ್ತಾಳೆ. ಈ ಸಂಘರ್ಷದ ಪರಿಣಾಮಗಳನ್ನು ವಿವರಿಸುವ ಉದ್ದೇಶವನ್ನು ಪ್ರಸ್ತುತ ನಿಬಂಧವು ಹೊಂದಿದೆ.

ಚಾಂದ್‌ಬೀಬಿಯು ಬಿಜಾಪುರದ ಮತ್ತು ಅಹಮದನಗರದಲ್ಲಿ ಸಲ್ಲಿಸಿದ ಸೇವೆ, ವೈರಿಗಳಿಂದ ರಾಜ್ಯವನ್ನು ರಕ್ಷಿಸಲು ನಡೆಸಿದ ಪ್ರಯತ್ನಗಳು, ಸೈನ್ಯಕಾರ್ಯಾಚರಣೆ, ಆಡಳಿತದ ನೀತಿ ಹಾಗೂ ಅವಳ ಸಾಧನೆಗಳನ್ನು ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ಸ್ತ್ರೀವಾದಿ ಚರಿತ್ರೆಯ ಹಿನ್ನೆಲೆಯಿಂದಲೂ ಚಾಂದ್‌ಬೀಬಿಯ ಅಧ್ಯಯನ ಮಾಡುವ ಉದ್ದೇಶವನ್ನು ಈ ಅಧ್ಯಯನವು ಒಳಗೊಂಡಿದೆ. ಅರಮನೆ ಕೇಂದ್ರಿತ ವ್ಯವಸ್ಥೆಯೊಳಗೆ ಹೆಣ್ಣು ಅನುಭವಿಸುವ ನೋವು ಹಾಗೂ ಅಧಿಕಾರ ಇದ್ದರೂ ಅದನ್ನು ಪಡೆಯುವುದಕ್ಕಾಗಿ ನಡೆಸಬೇಕಾದ ಯುದ್ಧಗಳು ಹಾಗೂ ಆ ಮೂಲಕ ಅಸ್ತಿತ್ವವನ್ನೇ ಕಳೆದುಕೊಳ್ಳುವ ಅಪಾಯವನ್ನು ಎದುರಿಸುವ ಸಂದರ್ಭಗಳು ಮುಂತಾದ ವಿಚಾರಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

## ಅಧ್ಯಯನದ ವಿಧಾನಗಳು

ಚಾಂದ್‌ಬೀಬಿಯ ಜೀವನ ಮತ್ತು ಸಾಧನೆಗಳನ್ನು ಕುರಿತು ಚಾರಿತ್ರಿಕ ಅಧ್ಯಯನ ಮಾಡಲಾಗಿದೆ. ಇಲ್ಲಿನ ಸಂಗತಿಗಳನ್ನು ಚರಿತ್ರೆ ಸಂಶೋಧನಾ ವಿಧಾನಗಳ ಮೂಲಕ ವಿಶ್ಲೇಷಣೆ ನಡೆಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಎಲ್ಲಾ ಬಗೆಯ ಪ್ರಾಥಮಿಕ, ಆನುಷಂಗಿಕ ಹಾಗೂ ಇತರ ಆಕರ ಸಾಮಗ್ರಿಗಳನ್ನು ಬಳಸಲಾಗಿದೆ. ಚಾಂದ್‌ಬೀಬಿಯ ಜೀವನ ಮತ್ತು ಸಾಧನೆಗಳ ಕುರಿತು ಬಂದಿರುವ ಕೃತಿಗಳನ್ನು ಹಾಗೂ ಲೇಖನಗಳನ್ನು ಪ್ರಮುಖ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ, 'ಟೇಲ್ಸ್ ಆಫ್ ಅಹಮದ್‌ನಗರ',[೧] 'ದಿ ನೋಬೆಲ್ ಕ್ವೀನ್',[೨] 'ಮೆಮೂಯಿರ್ಸ್ ಆಫ್ ಚಾಂದ್‌ಬೀಬಿ',[೩] 'ವೀರ ರಾಣಿ ಚಾಂದ್‌ಬೀಬಿ',[೪] 'ಬುಸಾತಿನೆ ಸಲಾತಿನ',[೫] 'ಬಿಜಾಪುರ ಆದಿಲ್‌ಶಾಹಿ',[೬] 'ಹಿಸ್ಟರಿ ಆಫ್ ಬಿಜಾಪುರ',[೭] 'ಮೊಗಲ್ ಇಂಡಿಯಾ',[೮] ಮುಂತಾದವು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಸಂಗ್ರಹಿಸಲಾದ ಮಾಹಿತಿಗಳನ್ನು ವಿಷಯಾನುಸಾರ ಜೋಡಿಸಿ ವಿಶ್ಲೇಷಿಸಲಾಗಿದೆ. ಅಧ್ಯಯನವು ವ್ಯಕ್ತಿನಿಷ್ಠತೆಯ ಕಡೆಗೆ ಸಾಗದಂತೆ ಎಚ್ಚರಿಕೆ ವಹಿಸಲಾಗಿದೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವಿಧಾನ ಮತ್ತು ಸ್ವರೂಪ ಕುರಿತು ಚರ್ಚಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಬಹಮನಿ ಮತ್ತು ಆದಿಲ್‌ಷಾಹಿಗಳ ಚಾರಿತ್ರಿಕ ಹಿನ್ನೆಲೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಚಾಂದ್‌ಬೀಬಿಯ ಜೀವನ ಪರಿಚಯ, ಶಿಕ್ಷಣ ಹಾಗೂ ಕೌಟುಂಬಿಕ ಜೀವನವನ್ನು ಕುರಿತು ಪ್ರಸ್ತಾಪಿಸಲಾಗಿದೆ. ಅಲ್ಲದೆ ಚಾಂದ್‌ಬೀಬಿಯ ಮೇಲೆ ಪ್ರಭಾವ ಬೀರಿದ ವ್ಯಕ್ತಿ ಹಾಗೂ ಅಲಿ ಆದಿಲ್‌ಷಾಹನ ಮರಣದ ನಂತರ ಬಿಜಾಪುರದಲ್ಲಿ ಅಧಿಕಾರ ಪಡೆದ ಬಗೆ ಮುಂತಾದ ವಿಚಾರಗಳನ್ನು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಚಾಂದ್‌ಬೀಬಿಯ ಆಂತರಿಕ ಸಂಘರ್ಷಗಳ ವಿವರಗಳನ್ನು ಒಳಗೊಂಡಿದೆ. ರಾಜ್ಯದಲ್ಲಿನ ರೀಜೆಂಟ್‌ಗಳು ಅಧಿಕಾರ ಕಬಳಿಸುವ ಮತ್ತು ಅವಳ ವಿರುದ್ಧ ಒಳಪಿತೂರಿಗಳನ್ನು ನಡೆಸುವ ವಿಷಯದ ಕುರಿತು ವಿಶ್ಲೇಷಿಸಲಾಗಿದೆ. ಚಾಂದ್‌ಬೀಬಿಯು ಬಿಜಾಪುರದಿಂದ ಅಹಮದನಗರಕ್ಕೆ ಆಗಮಿಸಿದ ಬಗೆ ಮತ್ತು ಅಹಮದನಗರದಲ್ಲಿ ಸಿಂಹಾಸನಕ್ಕಾಗಿ ನಡೆಸಿದ ಹೋರಾಟಗಳನ್ನು ವಿಶ್ಲೇಷಿಸಲಾಗಿದೆ. ಹಾಗೆಯೇ ಚಾಂದ್‌ಬೀಬಿಯು ಅಹಮದನಗರದಲ್ಲಿ ಅಧಿಕಾರ ಪಡೆದ ಬಗೆಯನ್ನು ವಿವರಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ಚಾಂದ್‌ಬೀಬಿಯು ಉತ್ತರ ಭಾರತದ ಬಲಿಷ್ಠ ಸಾಮ್ರಾಜ್ಯವಾದ ಮೊಗಲ್ ಸಾಮ್ರಾಜ್ಯದ ವಿರುದ್ಧ ಹೋರಾಡಿದ ಮತ್ತು ಕೋಟೆಯ ರಕ್ಷಣೆ ಮಾಡಿದ ಕುರಿತು ವಿಶ್ಲೇಷಿಸಲಾಗಿದೆ. ಮೊಗಲ್‌ರ ವಿರುದ್ಧ ಮೊದಲೆರಡು ಯುದ್ಧಗಳ ಜಯ ಮತ್ತು ಸೋಲಿನ ಕಹಿಯ ಕುರಿತು ವಿಶ್ಲೇಷಿಸಲಾಗಿದೆ. ಚಾಂದ್‌ಬೀಬಿಯ ಧೋರಣೆಯನ್ನು ತಪ್ಪಾಗಿ ಗ್ರಹಿಸಿ ಅವಳನ್ನು ಮೋಸದಿಂದ ಕೊಲೆ ಮಾಡಿದ ವಿಚಾರವಾಗಿಯೂ ಇಲ್ಲಿ ಚರ್ಚಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ.

### ಟಿಪ್ಪಣಿಗಳು

೧. ಕ್ಯಾಪ್ಟನ್ ಸಿ.ಸಿ. ಕೌಲೇ, ಟೇಲ್ಸ್ ಆಫ್ ಅಹಮದ್‌ನಗರ, ಅಹಮುದ್‌ನಗರ, ೧೯೧೮, ಪು.೧

೨. ಮೆಡೋಸ್ ಟೇಲರ್, ಎ ನೋಬೆಲ್ ಕ್ವೀನ್, ಎ ರೋಮ್ಯಾನ್ಸ್ ಆಫ್ ಇಂಡಿಯನ್ ಹಿಸ್ಟರಿ., ಏಷ್ಯನ್ ಎಜುಕೇಷನ್ ಸರ್ವಿಸಸ್., ನವದೆಹಲಿ, ೧೯೮೬, ಪುಟ.೧

೩. ಖಾದ್ರಿ ಎಸ್.ಎ., ಮೆಮೋಯರ್ಸ್ ಆಫ್ ಚಾಂದ್‌ಬೀಬಿ, ಉಸ್ಮಾನಿಯಾ ಯುನಿವರ್ಸಿಟಿ, ಹೈದರಾಬಾದ್, ೧೯೩೮, ಪು.೧

೪. ವೆಂಕಟಸುಬ್ಬಯ್ಯ ಹೆಚ್.ಓ., ವೀರರಾಣಿ ಚಾಂದ್‌ಬೀಬಿ, ರವಿಚಂದ್ರ ಪ್ರಕಾಶನ, ವಿಶ್ವೇಶ್ವರನಗರ, ಮೈಸೂರು, ೨೦೦೧, ಪು.೧

೫. ಕೃಷ್ಣ ಕೊಲ್ಹಾರ ಕುಲಕರ್ಣಿ, ಬುಸಾತಿನ ಸಲಾತೀನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪು.೧

೬. ಕೃಷ್ಣ ಕೊಲ್ಹಾರ ಕುಲಕರ್ಣಿ, ಬಿಜಾಪುರ ಆದಿಲ್‌ಶಾಹಿ, ಪ್ರಕಾಶಕರು, ಸಿಕ್ಯಾಬ ಆದಿಲ್‌ಶಾಹಿ ಅಧ್ಯಯನ ಸಂಸ್ಥೆ, ಬಿಜಾಪುರ, ೨೦೦೨, ಪು.೧

೭. ವರ್ಮಾ ಡಿ.ಸಿ., ಹಿಸ್ಟರಿ ಆಫ್ ಬಿಜಾಪುರ, ಕುಮಾರ್ ಬ್ರದರ್ಸ್, ನವದೆಹಲಿ., ೧೯೭೪., ಪು.೧

೮. ಮುದ್ದಾಚಾರಿ ಬಿ., ಮೊಗಲರ ಇಂಡಿಯಾ, ಶ್ರೀ ಲಕ್ಷ್ಮೀನರಸಿಂಹ ಪ್ರೆಸ್, ಶ್ರೀಗಣಪತಿ ಸಚ್ಚಿದಾನಂದ ಆಶ್ರಮ, ಮೈಸೂರು, ೧೯೮೧, ಪು.೧

* * *

# ಬಹಮನಿ ಮತ್ತು ಆದಿಲ್‌ಷಾಹಿಗಳ ಚಾರಿತ್ರಿಕ ಹಿನ್ನೆಲೆ

೧೪ನೆಯ ಶತಮಾನದ ಪ್ರಾರಂಭದಲ್ಲಿ ದಕ್ಷಿಣ ಭಾರತದಲ್ಲಿಯ ದೇವಗಿರಿಯ ಯಾದವರನ್ನು ಮುಸ್ಲಿಂ ಅರಸರು ಸೋಲಿಸಿ ದೇವಗಿರಿಯನ್ನು ದೆಹಲಿಯ ಆಧಿಪತ್ಯಕ್ಕೆ ಸೇರಿಸಿದರು. ಇವರ ಅಧೀನದಲ್ಲಿದ್ದ ತರ್ದವಾಡಿ-೧೦೦೦ದ ಬಿಜಾಪುರದ ಪ್ರದೇಶಕ್ಕೆ ಕಲೀಮುದ್ದೀನನು ರಾಜ್ಯಪಾಲನಾಗಿದ್ದ.[೧] ಕ್ರಿ.ಶ.೧೩೨೭ರಲ್ಲಿ ಮಹಮದ್-ಬಿನ್-ತುಘಲಕನ ಆಳ್ವಿಕೆಯ ಅವಧಿಯಲ್ಲಿ ದಕ್ಷಿಣ ಭಾರತದ ಹಲವಾರು ಪ್ರದೇಶಗಳು ಒಳಪಟ್ಟವು. ಕೆಲವೇ ದಿನಗಳಲ್ಲಿ ಅವನ ಆಳ್ವಿಕೆಯಿಂದ ಬೇಸತ್ತು ಸರದಾರರು ಬಂಡಾಯ ಎದ್ದು, ತಮ್ಮ ಸ್ವಾತಂತ್ರ್ಯವನ್ನು ಸಾರಹತ್ತಿದರು. ಪ್ರಪ್ರಥಮವಾಗಿ ಬಂಗಾಳದಲ್ಲಿ ಬಂಡಾಯ ಏಳಲಾಯಿತು. ಮರುವರುಷವೇ ಕ್ರಿ.ಶ.೧೩೩೫ರಲ್ಲಿ ತೀರ ದಕ್ಷಿಣದ ಮಲಬಾರ (ಮದುರೈ)ದಲ್ಲಿಯ ಸುಲ್ತಾನ 'ಜಲಾಲುದ್ದೀನ ಅಶನಖಾನನು' ಬಂಡಾಯ ಎದ್ದು ತನ್ನ ಸ್ವಾತಂತ್ರ್ಯವನ್ನು ಸಾರಿದನು.[೨] ಇದುವೇ ದಕ್ಷಿಣ ಭಾರತದಲ್ಲಿಯ ಪ್ರಪ್ರಥಮ ಮುಸ್ಲಿಂ ರಾಜ್ಯವೆನಿಸಿತು. ಅದೇ ಸಂದರ್ಭದಲ್ಲಿ ದಕ್ಷಿಣದಲ್ಲಿ ಮತ್ತೊಂದು ರಾಜ್ಯ ಅಸ್ತಿತ್ವಕ್ಕೆ ಬಂದಿತು.

ಕ್ರಿ.ಶ. ೧೩೩೬ರಲ್ಲಿ ಕಂಪಲಿಯ ರಾಜ್ಯಪಾಲ ಸಂಗಮ ವಂಶದ ಹರಿಹರ ಮತ್ತು ಬುಕ್ಕರು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿ ತುಂಗಭದ್ರೆಯ ನದಿಯ ತಟದಲ್ಲಿ ಒಂದು ಹೊಸ ರಾಜ್ಯವನ್ನು ಸ್ಥಾಪಿಸಿದರು. ಅದುವೆ ವಿಜಯನಗರ ರಾಜ್ಯವಾಯಿತು. ವಿಜಯನಗರವು ಉತ್ತರ ಭಾರತದಿಂದ ಬರುತ್ತಿದ್ದ ದಾಳಿಗಳಿಗೆ ಎದುರಾಗಿ ಒಂದು ಬಲವಾದ ತಡೆಗೋಡೆಯಾಯಿತು.[೩] ತೀರ ದಕ್ಷಿಣದಲ್ಲಿಯ ಮಲಬಾರದಲ್ಲಿಯ ಮುಸಲ್ಮಾನರ ರಾಜ್ಯ, ಮಧ್ಯದಲ್ಲಿಯ ಹಿಂದೂಗಳ ವಿಜಯನಗರ ರಾಜ್ಯ ಹಾಗೂ ಉತ್ತರದಿಂದ ದೆಹಲಿಯ ಮಧ್ಯ ತುಂಬಾ ಅಂತರವಾಯಿತು. ಈ ಅಂತರವೇ ಅಲ್ಲಿ ಮತ್ತೊಂದು ಹೊಸ ರಾಜ್ಯಕ್ಕೆ ನಾಂದಿಯಾಯಿತು. ಏಕೆಂದರೆ ಮಹಮದ್-ಬಿನ್-ತುಘಲಕನು ದಖನಿನ ಆಡಳಿತವನ್ನು ನಿರ್ವಹಿಸಲು ಅಧಿಕಾರಿಗಳನ್ನು ನೇಮಿಸಿದನು. ಆದರೆ ಅವನ ದುರಾಡಳಿತದಿಂದ ಎಲ್ಲ ಅಮೀರರು ಮತ್ತು ಅಧಿಕಾರಿಗಳು ಕ್ರಿ.ಶ. ೧೩೪೬ರಲ್ಲಿ ದಖನ್ನಿನ ದೌಲತಾಬಾದಿನಲ್ಲಿ ಸಭೆ ಸೇರಿದರು. ಮಹಮದ್-ಬಿನ್-ತುಘಲಕನ ನಿರಂಕುಶ ಪ್ರಭುತ್ವದ ವಿರುದ್ಧ ಅಸಮಾಧಾನಗೊಂಡಿದ್ದ ಹಲವಾರು ಅಮೀರರಲ್ಲಿ ಮೀರಜಿನ ಜಾಗೀರುದಾರನಾದ ಹಸನ್ (ಜಾಫರ್ ಖಾನ್) ಒಬ್ಬನಾಗಿದ್ದನು.[೪] ಹಸನ್‌ನನು ಮಹಮದ್-ಬಿನ್-ತುಘಲಕನ ವಿರುದ್ಧ ದಂಗೆ ಎದ್ದು ದಖನ್‌ನಲ್ಲಿ ಕ್ರಿ.ಶ. ೧೩೪೭ರಲ್ಲಿ 'ಬಹಮನಿ' ರಾಜ್ಯವನ್ನು ಸ್ಥಾಪಿಸಿ 'ಗುಲಬರ್ಗಾ'ವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು.

## ಮೂಲ

ಬಹಮನಿಯ ಹಿನ್ನೆಲೆಯ ಬಗೆಗೆ ಚರಿತ್ರಕಾರಲ್ಲಿ ಒಮ್ಮತದ ಅಭಿಪ್ರಾಯಗಳಿಲ್ಲ. ಕ್ರಿ.ಶ. ೧೩೪೭ರ ವೇಳೆಗೆ ಸ್ಥಾಪನೆಯಾದ ಬಹಮನಿಯರ ಮೂಲದ ಬಗೆಗೂ ಅನೇಕ ವಾದಗಳಿದ್ದು ಸ್ಪಷ್ಟವಾದ ನಿಲುವನ್ನು ತಳೆಯಲು ಆಗಿಲ್ಲ. ಇತಿಹಾಸಕಾರರು ತಮ್ಮ ವಾದಗಳನ್ನು ಮಂಡಿಸಿ ಅವುಗಳನ್ನು ಸಮರ್ಥಿಸಿಕೊಳ್ಳುತ್ತಾ ಬಂದಿದ್ದಾರೆ. ಇದರಿಂದ ನಿರ್ದಿಷ್ಟವಾಗಿ ಬಹಮನಿಯರ ಮೂಲದ ಬಗೆಗೆ ಹೇಳುವುದು ಕಷ್ಟಕರವಾಗಿದೆ. ಸಾಮಾನ್ಯವಾಗಿ ನಡೆಯುವಂತೆ ಬಹಮನಿ ಸುಲ್ತಾನರ ವಿಚಾರದಲ್ಲೂ ಪೂರ್ವ ಕಥೆ ಹಾಗೂ ವಂಶಾವಳಿಗೆ ಸಂಬಂಧಿಸಿದಂತೆ ಹಲವಾರು ಐತಿಹ್ಯಗಳು ಪ್ರಚಲಿತದಲ್ಲಿದ್ದವು. ಫೆರಿಸ್ತಾ ತನ್ನ ಕೃತಿಯನ್ನು ಬರೆದ ಸಮಯದಲ್ಲೂ ಇಂಥ ಎಷ್ಟೋ ಐತಿಹ್ಯಗಳಿದ್ದು, ಅವುಗಳ ಪೈಕಿ ಅತ್ಯಂತ ವಿಶ್ವಾಸಾರ್ಹ ಎನ್ನಿಸಿಕೊಂಡ ಒಂದನ್ನು ಆತ ದಾಖಲಿಸಿದ್ದಾನೆ. ಅದರ ಸಾರಾಂಶ ಹೀಗಿದೆ.

"ಹಸನ್ ದೆಹಲಿಯ ನಿವಾಸಿ ಗಂಗೂ ಎಂಬ ಬ್ರಾಹ್ಮಣನೊಬ್ಬನ ಸೇವಕನಾಗಿದ್ದ. ಒಮ್ಮೆ ಹೊಲದಲ್ಲಿ ಉಳುತ್ತಿರುವಾಗ ಇವನಿಗೆ ಚಿನ್ನದ ನಾಣ್ಯಗಳಿಂದ ತುಂಬಿದ್ದ ಒಂದು ತಾಮ್ರದ ಕುಡಿಕೆ ಸಿಕ್ಕಿತು. ಹಸನ್ ಅದನ್ನು ಕೂಡಲೇ ತನ್ನ ಯಜಮಾನನಿಗೆ ಒಪ್ಪಿಸಿದ. ಅವನ ಪ್ರಾಮಾಣಿಕತೆಯಿಂದ ಬೆರಗಾದ ಬ್ರಾಹ್ಮಣ ಈ ವಿಚಾರವನ್ನು ಸುಲ್ತಾನನಿಗೆ ವರದಿ ಮಾಡಿದ. ಇದರಿಂದಾಗಿ ಹಸನ್‌ನಿಗೆ ಒಂದು ನೂರು ಕುದುರೆಗಳ ಸರದಾರನ ಹುದ್ದೆ ಸಿಕ್ಕಿತು. ಅಲ್ಲದೆ ಜ್ಯೋತಿಷಿಯಾದ ಈ ಬ್ರಾಹ್ಮಣ ಹಸನ್‌ನಿಗೆ ಇನ್ನೂ ಉಜ್ವಲವಾದ ಭವಿಷ್ಯವಿರುವುದನ್ನು ಮನಗಂಡ ಮತ್ತು ಮುಂದೆಂದಾದರೂ ಅವನು ರಾಜನಾದರೆ 'ಗಂಗೂ' ಎನ್ನುವ ಬಿರುದು ಧರಿಸಬೇಕು ಎಂದು ಮಾತು ತೆಗೆದುಕೊಂಡ"[೩] ಎಂದು ಫೆರಿಸ್ತಾನು ತಿಳಿಸಿದ್ದಾನೆ. ಅದರಂತೆ ಹಸನ್‌ನು 'ಗಂಗೂ' ಎಂಬ ಉಪನಾಮವನ್ನು ಧರಿಸಿದ ಎಂದು ತಿಳಿದುಬರುತ್ತದೆ. ಆದರೆ 'ಮೇಜರ್‌ಕಿಂಗ್' ಇಂಡಿಯನ್ ಅಂಟಿಕ್ವೆರಿಯಲ್ಲಿ ಬುರ್ಹಾನ್-ಇ-ಮಾಸಿರಿಯನ್ನು ಭಾಷಾಂತರ ಮಾಡಿದಾಗ ಫೆರಿಸ್ತಾನ ಕಥೆಯ ಸತ್ಯತೆಯನ್ನು ಸಂದೇಶಿಸಿದನು ಎಂದು ಬಿ. ಷೇಕ್ ಅಲಿಯವರು ತಮ್ಮ ಕೃತಿಯಾದ 'ಕರ್ನಾಟಕ ಚರಿತ್ರೆ ಸಂಪುಟ-೪ರಲ್ಲಿ ತಿಳಿಸಿದ್ದಾರೆ.[೪] ಇನ್ನೊಂದು ಕತೆ ಹೀಗಿದೆ: ಹಸನ್‌ನು 'ಬಹಮನ್ ಶಹಾ' ಎಂಬ ಪರ್ಷಿಯನ್ ವೀರನ ವಂಶಜ. ಅವನು ಇಸ್‌ಪಂಧಿಯಾರನ ಮಗನಾದ್ದರಿಂದ ವಂಶವನ್ನು 'ಬಹಮನಿ' ಎಂದು ಕರೆಯಲಾಯಿತು. ವಂಶಾವಳಿತಜ್ಞರು ಅವನನ್ನು ಪರ್ಷಿಯನ್ ಮೂಲದೊಂದಿಗೆ ಸಂಬಂಧಗೊಳಿಸಿದರು.[೫] ಆಧುನಿಕ ವಿಧ್ವಾಂಸರು ಬಹಮನಿ ವಂಶದ ವಿದೇಶಿ ಮೂಲವು ಸಂಭಾವ್ಯವಲ್ಲ ಎಂದು ಭಾವಿಸುತ್ತಾರೆ. ಬೇರೆ ಯಾವ ಒಪ್ಪುವ ಆಧಾರವೂ ದೊರಕುತ್ತಿಲ್ಲವಾದ್ದರಿಂದ ಫೆರಿಸ್ತಾನ ಕತೆಯನ್ನು ಸಂಪೂರ್ಣವಾಗಿ ಅಲಕ್ಷಿಸುವುದು ಸಾಧ್ಯವಿಲ್ಲ. ಒಟ್ಟಾರೆ ಹಸನ್‌ನನು ಸಾಮಾನ್ಯ ಕುಟುಂಬವೊಂದರಲ್ಲಿ ಹುಟ್ಟಿ ಸ್ವಪ್ರಯತ್ನದಿಂದಲೇ ಮೇಲೆ ಬಂದು ಗದ್ದುಗೆಯನ್ನೇರಿದ ಎಂದಂತೂ ಹೇಳಬಹುದು. ಹಾಗೇ ಅವನು ಹುಟ್ಟುಹಾಕಿದ ವಂಶವು 'ಬಹಮನಿ' ವಂಶವೆಂದು ಚರಿತ್ರೆಯಲ್ಲಿ ಪ್ರಸಿದ್ಧವಾಗಿ, ಮುಂದಿನ ಇನ್ನೂರು ವರ್ಷಗಳ ಕಾಲ ದಖನ್ನನ್ನು ಆಳಿತು.

## ಬಹಮನಿಯ ರಾಜಕೀಯ ಚರಿತ್ರೆ

ಕ್ರಿ.ಶ. ೧೪ನೇ ಶತಮಾನದ ಪೂರ್ವಾರ್ಧ ಸಮಯದಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾದ ಹನ್ನೊಂದು ವರ್ಷಗಳ ನಂತರ ಕ್ರಿ.ಶ. ೧೩೪೭ರಲ್ಲಿ 'ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನಿ ಷಾಹ' ಎಂಬುವನು 'ಬಹಮನಿ' ರಾಜ್ಯವನ್ನು ಸ್ಥಾಪಿಸಿದನು. ಇವನು ಗುಲಬರ್ಗಾ(ಕಲಬುರ್ಗಿ)ವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ದಖಿನ್‌ನಲ್ಲಿ ಆಡಳಿತ ಪ್ರಾರಂಭಿಸಿದನು. ಬಹಮನಿಯು ವಿಜಯನಗರದ ಸಮಕಾಲೀನ ಸಾಮ್ರಾಜ್ಯವಾಗಿತ್ತು. ಬಹಮನಿಯ ಮೂಲದ ಬಗೆಗೆ ಅನೇಕ ಭಿನ್ನಾಭಿಪ್ರಾಯಗಳಿವೆ. ಆದರೂ ಈ ವಂಶದ ಮೊದಲನೇ ಸುಲ್ತಾನ ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನ್ ಷಹಾನು' ಈ ಮನೆತನದ ಆರಂಭದ ಸುಲ್ತಾನನಾಗಿದ್ದನು.

## ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನ್ ಷಾಹಾ (೧೩೪೭-೫೮)

ಯಾವುದೇ ರಾಜ್ಯ ಸ್ಥಾಪನೆಯ ಪ್ರಾರಂಭಿಕ ಹಂತಗಳಲ್ಲಿ ಸ್ಥಾಪಕರಲ್ಲಿ ಅತ್ಯುತ್ತಮವಾದ ಗುಣಗಳಿರಬೇಕಾಗುತ್ತದೆ. ಅಲ್ಲಾವುದ್ದೀನ್‌ನಿಗೆ ಇದು ಹೂವಿನ ಹಾಸಿಗೆಯಾಗಿರಲಿಲ್ಲ. ಅತ್ಯಲ್ಪಾವಧಿಯಲ್ಲೇ ಸಾಮ್ರಾಜ್ಯವನ್ನು ನಾಲ್ಕು ದಿಕ್ಕಲ್ಲೂ ವಿಸ್ತರಿಸುವಲ್ಲಿ ಯಶಸ್ವಿಯಾದ ಇವನು, ಬಂಡೆದ್ದು ಜಮಖಂಡಿಯಲ್ಲಿ ಅಡಗಿಕೊಂಡಿದ್ದ ಮುಧೋಳದ ನಾರಾಯಣ ಘೋರ್ಪಡೆಯನ್ನು ಸೋಲಿಸಿ ಅವನಿಂದ ಜಮಖಂಡಿಯನ್ನು ವಶಪಡಿಸಿಕೊಂಡನು. ಸೋತು ಶರಣಾದ ನಾರಾಯಣನಿಗೆ ಸುಲ್ತಾನನು ಮುಧೋಳವನ್ನು ಜಾಗೀರಾಗಿ ನೀಡಿದನು. ಈ ಮುತ್ತಿಗೆಯ ನಾಯಕತ್ವವನ್ನು ಯಶಸ್ವಿಯಾಗಿ ನಿರ್ವಹಿಸಿದ ಮೇವಾರದ ದೀಪಸಿಂಗನಿಗೆ ಸುಲ್ತಾನನು ದೌಲತಾಬಾದ್ ಪ್ರಾಂತದಲ್ಲಿ ಹತ್ತು ಹಳ್ಳಿಗಳನ್ನು ಉಂಬಳಿಯಾಗಿ ನೀಡಿದನು. ಸುಲ್ತಾನನು ೧೩೫೨ರಲ್ಲಿ ಬಹಮನಿ ಸಾಮ್ರಾಜ್ಯವನ್ನು ನಾಲ್ಕು ಪ್ರಾಂತಗಳನ್ನಾಗಿ ವಿಂಗಡಿಸಿದನು.

೧. ರಾಯಚೂರು ಮತ್ತು ಮುದಗಲ್ ಪ್ರದೇಶಗಳನ್ನು ಗುಲಬರ್ಗಾದ ಪ್ರಧಾನಮಂತ್ರಿ ಸೈಪುದ್ದೀನ್ ಘೋರಿಯ ವಶದಲ್ಲಿಡಲಾಯಿತು.

೨. ದೌಲತಾಬಾದಿನ ಉಸ್ತುವಾರಿ ಸುಲ್ತಾನನ ಸೊದರಳಿಯ ಮಹಮ್ಮದ್‌ನ ವಶದಲ್ಲಿಡಲಾಯಿತು.

೩. ಬೀರಾರ್ ಪ್ರದೇಶವು ಸಫ್ದರ್‌ಖಾನ್ ಸಿಸ್ತನಿಯ ಕೈ ಕೆಳಗೆ ಬಂದಿತು.

೪. ಕಂದಹಾರ್, ಇಂದೋರ್ ಮತ್ತು ತೆಲಂಗಾಣದ ಪ್ರದೇಶಗಳ ಆಡಳಿತವನ್ನು ಸೈಪುದ್ದೀನನ ಮಗ ಹುಮಾಯೂನ್ ನೋಡಿಕೊಂಡನು.[೮]

ಪ್ರತಿಯೊಬ್ಬ ಅಮೀರನಿಗೂ ಒಂದು ಪ್ರಾಂತ್ಯವನ್ನು ಕೊಡಲಾಗಿತ್ತು. ಈ ಅಮೀರರು ಸಮಯ ಬಂದಾಗ ಸುಲ್ತಾನನಿಗೆ ಸಹಾಯ ಮಾಡಲು ಒಂದು ಸೈನ್ಯವನ್ನು ಹಾಗೂ ಅಧಿಕಾರಿಗಳನ್ನು ಇಡಬೇಕಾಗಿದ್ದಿತು. ಅಲ್ಲಾವುದ್ದೀನನು ಕ್ರಿ.ಶ. ೧೩೫೮ರಲ್ಲಿ ಮರಣ ಹೊಂದಿದನು.

**ಒಂದನೆ ಮಹಮ್ಮದ್ ಷಾಹ (೧೩೫೮-೭೫)**

ಸುಲ್ತಾನ ಅಲ್ಲಾವುದ್ದೀನನ ಮರಣಾನಂತರ ಗಾದಿ ಏರಿದ ಇವನು ಸಾಮ್ರಾಜ್ಯಕ್ಕೆ ಸ್ಥಿರತೆ ನೀಡುವುದರ ಜೊತೆಗೆ ಅದರ ವಿಸ್ತರಣೆಗೂ ಗಮನ ನೀಡಿದನು. ಸೈನಿಕ ಸುಧಾರಣೆ ಕೈಗೊಂಡ ಇವನು ಸಾಮ್ರಾಜ್ಯದ ನಾಲ್ಕು ಪ್ರಾಂತ್ಯಗಳಿಗೂ ನೂತನ ಅಧಿಕಾರಿಗಳನ್ನು ನೇಮಿಸಿದನು. ಅದರಂತೆ ಬಿಜಾಪುರ ಪ್ರದೇಶವನ್ನೊಳಗೊಂಡ ಗುಲಬರ್ಗಾ ಪ್ರಾಂತ್ಯಕ್ಕೆ 'ಮಲ್ಲಿಕ ನಾಯಿಬನನ್ನು' ನೇಮಿಸಿದನು.[೯] ಇವನ ನಂತರ ಅಧಿಕಾರಕ್ಕೆ ಬಂದ 'ಅಲ್ಲಾವುದ್ದೀನ್ ಮುಜಾಹಿದ್'(೧೩೭೫-೭೮), ಒಂದನೇ ದಾವೂದ (೧೩೭೮), ಎರಡನೆಯ ಮುಹಮ್ಮದ್ (೧೩೭೮-೯೭) ಹಾಗೂ ಘಿಯಾಸುದ್ದೀನ ತಹಂತರ್(೧೩೯೭)ರ ಆಳ್ವಿಕೆಯಲ್ಲಿ ಬಹಮನಿ ಆಸ್ಥಾನದಲ್ಲಿ ವಿದೇಶಿಮಂತ್ರಿ ವರ್ಗ ಅಫಕಿಗಳಿಗೂ ಮತ್ತು ದಖನಿ ಗುಂಪುಗಳ ನಡುವೆ ಅಧಿಕಾರಕ್ಕಾಗಿ ತಿಕ್ಕಾಟ ನಡೆದಿತ್ತು.

**ತಾಜುದ್ದೀನ್ ಫಿರೋಜ್ (೧೩೯೭-೧೪೨೨)**

ಘಿಯಾಸುದ್ದೀನನ ನಂತರ ತಾಜುದ್ದೀನ್ ಫಿರೋಜ ಕ್ರಿ.ಶ. ೧೩೯೭ರಲ್ಲಿ ಬಹಮನಿಯ ಸುಲ್ತಾನನಾದನು. ಅಫಕಿಗಳ ಹಾಗೂ ದಖನಿಗಳ ನಡುವಿನ ತಿಕ್ಕಾಟ, ನಡೆದಿದ್ದ ಗುಂಪುಗಾರಿಕೆಯನ್ನು ಬಗ್ಗು ಬಡಿಯಲು ಮುಂದಾಗಿ ಆಡಳಿತದಲ್ಲಿ ಬ್ರಾಹ್ಮಣರಿಗೆ ಅವಕಾಶ ಕಲ್ಪಿಸಿಕೊಟ್ಟನು. ಇವನು ಕ್ರಿ.ಶ. ೧೩೯೮ರಲ್ಲಿ ಮುದೋಳದಲ್ಲಿ ೮೪ ಹಳ್ಳಿಗಳ ಒಂದು ಜಗೀರನ್ನು ಭೈರೋನ್‌ಸಿಂಗ್‌ನಿಗೆ ನೀಡಿದನು.[೧೦] ಇವನ ಆಡಳಿತದ ಕೊನೆಯ ವರ್ಷಗಳಲ್ಲಿ ಸೂಫಿ ಸಂತ 'ಹಜರತ್ ಮಹಮದ ಗೇಸುದ್ ರಾಜ್' ದೆಹಲಿಯಿಂದ ಬಂದು ಗುಲಬರ್ಗಾದ ಬಳಿ ಖಾನಕಾದಲ್ಲಿ ನೆಲೆಸಿದನು.

**ಬಹಮನಿಯ ಬೀದರ್ ಹಂತ (೧೪೨೨-೮೭)**

ಬಹಮನಿ ರಾಜ್ಯದ ಗುಲಬರ್ಗಾ ಹಂತದ ಕೊನೆಯ ಸುಲ್ತಾನ ತಾಜುದ್ದೀನ್ ಫಿರೋಜ್ ಆಗಿದ್ದನು. ಮುಂದಿನ ಸುಲ್ತಾನನಾದ ಅಹಮದನು ರಾಜಧಾನಿಯನ್ನು ಬೀದರ್‌ಗೆ ವರ್ಗಾಯಿಸಿದನು. ಬೀದರ್ ಹಂತವು ಬಹಮನಿ ಆಳ್ವಿಕೆಯಲ್ಲಿ ಮೂರು ಮುಖ್ಯ ವಿಚಾರಗಳಿಗಾಗಿ ಮಹತ್ವದ್ದಾಗಿದೆ. ಮೊದಲನೆಯದು ಗುಲಬರ್ಗಾದಿಂದ ಬೀದರ್‌ಗೆ ರಾಜಧಾನಿ ವರ್ಗಾವಣೆ, ಎರಡನೆಯದು ಆ ಸಮಯದಲ್ಲಿ ಅತಿ ಸಮರ್ಥ ರಾಜಕಾರಣಿಗಳಲ್ಲಿ ಒಬ್ಬನಾದು, ಕುಶಲ ಆಡಳಿತಗಾರನಾದ 'ಮಹಮೂದ್ ಗವಾನನ' ಪಾತ್ರ ಹಾಗೂ ಮೂರನೆಯದು ಅಫಕಿಗಳಿಗೂ ಮತ್ತು ದಖನಿಗಳಿಗೂ ನಡುವೆ ದ್ವೇಷವು ತೀವ್ರವಾಗಿದ್ದದ್ದು. ಈ ಉದ್ವೇಶವು ಕ್ರಿ.ಶ. ೧೪೮೭ರಲ್ಲಿ ಪರಾಕಾಷ್ಠೆಯನ್ನು ಮುಟ್ಟಿ ದಖನಿಗಳ ಸಾಮೂಹಿಕ ಕಗ್ಗೊಲೆಯೇ ನಡೆದು ಹೋಯಿತು. ಇದರಿಂದಾಗಿ ಬಲಿಷ್ಠರಾದ ನಾಯಕರು ತಮ್ಮದೇ ಸ್ವತಂತ್ರ ಸಂಸ್ಥಾನಗಳನ್ನು ಕಟ್ಟಿಕೊಳ್ಳಲು ನಿರ್ಧರಿಸಿದರು.

**ಶಹಾಬುದ್ದೀನ್ ಅಹಮದ್ (೧೪೨೨-೩೬)**

ಫಿರೋಜ್‌ನ ಬಳಿಕ ಅಧಿಕಾರಕ್ಕೆ ಬಂದು ಚರಿತ್ರೆಯಲ್ಲಿ 'ವಲಿ' ಎಂದು ಪ್ರಸಿದ್ಧನಾದ ಅಹಮದ್‌ನು ಬಹಮನಿಯ ರಾಜಧಾನಿಯನ್ನು ಗುಲಬರ್ಗಾದಿಂದ ಬೀದರ್‌ಗೆ ೧೪೨೫ರಲ್ಲಿ ಸ್ಥಳಾಂತರಿಸಿದನೆಂದು ತೋರುತ್ತದೆ.[೧೧]

ರಾಜಧಾನಿಯನ್ನು ವರ್ಗಾಯಿಸಲು ಕಾರಣವೆಂದರೆ, ಅಹಮದ್‌ನ ಗುರುವಾಗಿದ್ದ 'ಸಂತ ಹಜರತ್ ಗೇಸೂ ದರಾಜ್' ಅವರು. ಇವನು ಅಧಿಕಾರಕ್ಕೆ ಬರುವುದರಲ್ಲೇ ಅವರು ಮರಣ ಹೊಂದಿದ್ದರು ಮತ್ತು ಗುಲಬರ್ಗಾವು ಅಧಿಕಾರಕ್ಕಾಗಿ ಕಿತ್ತಾಟ, ಒಳಸಂಚು, ಪಿತೂರಿಗಳ ಕೇಂದ್ರವಾಗಿತ್ತು. ರಾಜಧಾನಿಯನ್ನು ಸ್ಥಳಾಂತರಿಸುವುದರಿಂದ ಉತ್ತಮ ವಾತಾವರಣವು ಸೃಷ್ಟಿಯಾಗಬಹುದು ಎಂದು ಅಹಮದನಿಗೆ ಅನ್ನಿಸಿರಬೇಕು. ಬೀದರ್‌ನ ಹಿತಕರವಾದ ಹವೆಯೂ ಈ ವರ್ಗಾವಣೆಗೆ ಹೆಚ್ಚಿನ ಪ್ರೇರಣೆ ನೀಡಿರಬಹುದು. ಇವನ ಆಡಳಿತದ ಅವಧಿಯಲ್ಲಿಯೂ ಕೂಡ ವಿಜಯನಗರದ ಅರಸರೊಂದಿಗೆ ಮುದಗಲ್ ಕೋಟೆಗಾಗಿ ಯುದ್ಧ ಮಾಡಿದನು. ಇವನು ಧಾರ್ಮಿಕ ಮನೋಭಾವದವನಾಗಿದ್ದು 'ವಲಿ' ಎಂದೇ ಇತಿಹಾಸದಲ್ಲಿ ಗುರುತಿಸಲ್ಪಟ್ಟಿದ್ದಾನೆ. ಈತನ ಸಮಾಧಿಯು ಅಷ್ಟೂರಿ (ಬೀದರ್ ಜಿಲ್ಲೆ)ನಲ್ಲಿದೆ.

## ಎರಡನೆಯ ಅಲ್ಲಾವುದ್ದೀನ್ ಅಹಮದ್ (೧೪೩೬-೫೮)

ಇವನ ಆಳ್ವಿಕೆಯಲ್ಲಿ ಸೋದರ ಮಹಮದಖಾನನು ದಂಗೆ ಎದ್ದನು. ಅವನನ್ನು ನಿಗ್ರಹಿಸಿದ ಸುಲ್ತಾನನು, ಸೋದರ ಮಹಮದಖಾನನನ್ನು ಕ್ಷಮಿಸಿ ರಾಯಚೂರು ಪ್ರದೇಶದ ಆಡಳಿತವನ್ನು ಅವನಿಗೆ ವಹಿಸಿದ್ದನು. ಇದನ್ನು ಪುಷ್ಟೀಕರಿಸುವ ಶಾಸನವೊಂದು ಜಿಲ್ಲೆಯ ಹಲಸಂಗಿಯಿಂದ ವರದಿಯಾಗಿದೆ.[೨] ಇದು ಸುಲ್ತಾನನ ಸಾಮ್ರಾಜ್ಯದ ಗಡಿಯನ್ನು ನಿರ್ದೇಶಿಸುವ ಗಡಿ ಬಂಧ ಶಾಸನವಾಗಿದೆ. ಇವನ ಆಳ್ವಿಕೆಯಲ್ಲಿ ವಿಜಯನಗರದ ಅರಸ ಇಮ್ಮಡಿ ದೇವರಾಯನು ೧೪೪೩ರಲ್ಲಿ ಬಹಮನಿ ಸಾಮ್ರಾಜ್ಯದ ಮೇಲೆ ದಾಳಿ ಮಾಡಿ ಸಗರ, ಬಿಜಾಪುರ ಪ್ರಾಂತ್ಯಗಳನ್ನು ಸುಲಿಗೆ ಮಾಡುವಂತೆ ಸರದಾರರಿಗೆ ಆದೇಶಿಸಿದನು. ಈ ಆಕ್ರಮಣವನ್ನು ಹಿಮ್ಮೆಟ್ಟಿಸುವಲ್ಲಿ ಸುಲ್ತಾನನಿಗೆ ನೆರವಾದವರಲ್ಲಿ ಬಿಜಾಪುರದ ರಾಜ್ಯಪಾಲ ಖಾನಜಮಾನನು ಪ್ರಮುಖನಾಗಿದ್ದನು. ಇವನ ಆಳ್ವಿಕೆಯಲ್ಲಿ ಅನೇಕ ಪ್ರಗತಿಪರ ಕಾರ್ಯಗಳು ನಡೆದವು.

## ಅಲ್ಲಾವುದ್ದೀನ್ ಹುಮಾಯೂನ್ ಷಾಹಾ (೧೪೫೮-೬೧)

ಎರಡನೆಯ ಅಲ್ಲಾವುದ್ದೀನ್ ಅಹಮದ್ ನಂತರ ಹುಮಾಯೂನ್ ಷಾಹನು ಅಧಿಕಾರಕ್ಕೆ ಬಂದನು. ಅತ್ಯಲ್ಪ ಕಾಲ ಅಧಿಕಾರದಲ್ಲಿದ್ದ ಇವನ ಆಳ್ವಿಕೆಯಲ್ಲಿ, ಹಸನ್‌ಖಾನನು ಸುಲ್ತಾನನ ವಿರುದ್ಧ ದಂಗೆ ಎದ್ದನು. ರಾಜಕುಮಾರ ಹಸನ್‌ಖಾನನು ಬಂಧನಕ್ಕೊಳಗಾದರೂ ಅವಕಾಶ ಸಿಕ್ಕಿದಾಗ ಹಸನ್‌ಖಾನ್‌ನು ಸೆರೆಮನೆಯಿಂದ ತಪ್ಪಿಸಿಕೊಂಡು ಬೀದರ್‌ನಿಂದ ಬಿಜಾಪುರಕ್ಕೆ ಬಂದಾಗ ಅವನನ್ನು ಹಾಗೂ ಅವನ ಬೆಂಬಲಿಗರನ್ನೂ ಬಿಜಾಪುರದ ಕೊತ್ವಾಲ ಸಿರಾಜುದ್ದೀನ್ ಜುನ್ಯೆದಿಯು ಆದರಿಸಿದಂತೆ ನಟಿಸಿ, ಅವನ ಹಿಂಬಾಲಕರನ್ನು ಕೊಂದು ರಾಜಕುಮಾರನನ್ನು ಬಂಧಿಸಿ ರಾಜಧಾನಿಗೆ ಕಳುಹಿಸಿದನು. ಮುಂದೆ ಬಹಮನಿ ಸಾಮ್ರಾಜ್ಯದ ಆಡಳಿತದಲ್ಲಿ ಮಹತ್ವದ ಪಾತ್ರ ವಹಿಸಲಿದ್ದ ಮಹಮೂದ್ ಗವಾನನು ಸುಲ್ತಾನನ ವಕೀಲ-ಉಲ್-ಸುಲ್ತಾನಾತ್‌ನೆಂದು ನೇಮಿಸಿ ಬಿಜಾಪುರದ ಆಡಳಿತವನ್ನು ಅವನಿಗೆ ವಹಿಸಿಕೊಟ್ಟನು. ಹುಮಾಯೂನ್‌ನು ನಿದ್ರಿಸುತ್ತಿದ್ದಾಗ ಒಬ್ಬ ಮನೆ ಕೆಲಸದ ಹೆಂಗಸು ಕೊಲೆ ಮಾಡಿದಳು. ಇದರಿಂದ ಹುಮಾಯೂನ್‌ನ ಆಡಳಿತ ೧೪೬೧ರಲ್ಲಿ ಕೊನೆಗೊಂಡಿತು.

## ಮೂರನೆಯ ಅಹಮದನ ಕಾಲದಲ್ಲಿ ರೀಜೆನ್ಸಿ (ಪ್ರತಿನಿಧಿಗಳ) ಆಡಳಿತ (೧೪೬೧-೬೩)

ಹುಮಾಯೂನನ ನಿಗೂಢ ಕೊಲೆಯ ನಂತರ ಅವನ ಎಂಟು ವರ್ಷದ ಮಗನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಲಾಯಿತು. ಮೂರನೆಯ ನಿಜಾಮುದ್ದೀನ್ ಅಹಮದ್ ಎಂಬ ಹೊಸ ನಾಮಕರಣದೊಂದಿಗೆ, ಪೂರ್ವಸೂಚನೆಯೋ, ಮುಂದಾಲೋಚನೆಯೋ, ಒಟ್ಟಿನಲ್ಲಿ ಒಂದು ರಾಜಪ್ರತಿನಿಧಿ ಆಡಳಿತವನ್ನು ರೂಪಿಸಿದನು. ಅದರಲ್ಲಿ ಮೂವರು ಸದಸ್ಯರಿದ್ದರು. ಅವರುಗಳೆಂದರೆ ಮಹಮೂದ್ ಗವಾನ, ಖ್ವಾಜಾಜಹಾನ್ ಮತ್ತು ವಿಧವೆ ರಾಣಿ ಮುಖ್ದಂ-ಇ-ಜಹಾನ್‌ನೇ. ಈ ವಿಧವೆ ರಾಣಿಯು ಬುದ್ಧಿವಂತೆ. ಇತರ ರೀಜೆಂಟರ ನೆರವಿನಿಂದ ಮೂರನೇ ಅಹಮದ್ ಹಾಗೂ ಮೂರನೇ ಮುಹಮದ್ ಈ ಇಬ್ಬರ ಆಳ್ವಿಕೆಯ ಅವಧಿಯಲ್ಲಿ ರಾಜ್ಯವನ್ನು ಮುನ್ನಡೆಸಿಕೊಂಡು ಹೋದಳು. ಇದರಿಂದ ಮಹಮೂದ್ ಗವಾನನಿಗೆ ಸಮಸ್ತ ಆಡಳಿತದ ಜವಾಬ್ದಾರಿ ಹೆಗಲಿಗೇರಿತು. ಖ್ವಾಜಾ ಜಹಾನ್‌ನು ತೆಲಂಗಾಣದ ವ್ಯವಹಾರವನ್ನು ನೋಡಿಕೊಂಡನು. ಮಹಮೂದ್ ಗವಾನನೂ ಎಲ್ಲ ವ್ಯವಹಾರಗಳಲ್ಲೂ ತನ್ನ ಹಿಡಿತವನ್ನು ಸಾಧಿಸಿರಲಿಲ್ಲವಾದ್ದರಿಂದ ಮೂರನೆಯ ಅಹಮದನ ಅಲ್ಪಕಾಲಿಕ ಆಳ್ವಿಕೆಯ ಅವಧಿಯಲ್ಲಿ ರಾಜ್ಯವನ್ನು ನಿರ್ವಹಿಸಿದವಳು ವಿದವೆ ರಾಣಿಯೇ ಆದ್ದರಿಂದ ಆಕೆಯನ್ನು 'ಹಾರೂನ್‌ಖಾನ್ ಶೇರವಾನಿ'ಯು ಭಾರತವು ಉತ್ಪಾದಿಸಿದ ಅತ್ಯಂತ ವಿವೇಕಿಯಾದ ಮಹಿಳೆ' ಎಂದು ವರ್ಣಿಸಿದ್ದಾನೆ.[೧೫] ಕ್ರಿ.ಶ. ೧೪೬೩ರಲ್ಲಿ ಮೂರನೆಯ ಅಹಮದನನ್ನು ಅವನ ರೀಜೆಂಟ್‌ಗಳು ಸಿಂಹಾಸನನಿಂದ ಕೆಳಗೆ ಇಳಿಸಿದರು.

## ಮೂರನೆಯ ಮಹಮದ್ (೧೪೬೩-೮೨)

ಕ್ರಿ.ಶ. ೧೪೬೩ರಲ್ಲಿ ಮೂರನೆಯ ಅಹಮದನ ತಮ್ಮನಾದ ಮೂರನೆಯ ಮಹಮದ್‌ನು ಪಟ್ಟಕ್ಕೆ ಬಂದನು. ಇವನು ಮಹಮೂದ ಗವಾನನನ್ನು ಪ್ರಧಾನಮಂತ್ರಿಯಾಗಿ ವಕೀಲ್-ಉಲ್-ಸುಲ್ತಾನಾತ್ ಆಗಿ ನೇಮಿಸಿದನು. ಮಧ್ಯಕಾಲೀನ ಕರ್ನಾಟಕ ಇತಿಹಾಸದಲ್ಲಿ ಮಹಮೂದ್ ಗವಾನನು ಒಬ್ಬ ಸಮರ್ಥ ಆಡಳಿತಗಾರನಾಗಿ ಗುರುತಿಸಿಕೊಂಡನು. ಈತನು ತನ್ನ ೪೨ನೇ ವಯಸ್ಸಿನಲ್ಲಿ ಅರೇಬಿಯಾದ ಗಿಲಾನ್‌ನಿಂದ ವ್ಯಾಪಾರಕ್ಕೋಸ್ಕರ ೧೪೫೩ರಲ್ಲಿ ಇಲ್ಲಿಗೆ ಬಂದನೆಂದು ಪ್ರತೀತಿಯಿದೆ. ರಾಜ್ಯಾಡಳಿತದಲ್ಲಿ ಎಲ್ಲ ವಿಭಾಗಗಳಲ್ಲಿಯೂ ಪ್ರಾವೀಣ್ಯತೆಯನ್ನು ಇವನು ಪ್ರದರ್ಶಿಸಿದನು. ಅರ್ಥ ಶಾಖೆಯನ್ನು ಸುಧಾರಣೆಗೊಳಿಸಿ ಸುವ್ಯವಸ್ಥಿತಗೊಳಿಸಿದನು. ಶಿಕ್ಷಣ ಕ್ಷೇತ್ರದಲ್ಲಿ ಈತನು ಕೈಗೊಂಡ ಸುಧಾರಣಾ ಕ್ರಮಗಳ ಫಲವಾಗಿ ಸಾಮ್ರಾಜ್ಯದಲ್ಲಿ 'ಮದರಸ'ಗಳನ್ನು ಹಾಗೂ 'ವಿಶ್ವವಿದ್ಯಾಲಯಗಳನ್ನು' ಸ್ಥಾಪಿಸಿರುವುದು ಈತನ ಗಣನೀಯ ಸಾಧನೆಗಳಾಗಿವೆ. ಪಾಂಡಿತ್ಯ ಪ್ರಿಯನಾಗಿದ್ದ ಈತನು ತನ್ನ ಗ್ರಂಥಾಲಯದಲ್ಲಿದ್ದ ೩೦೦೦ ಪುಸ್ತಕಗಳಿಗೂ ಮೀರಿದಂತೆ ಬೀದರ್‌ನಲ್ಲಿರುವ ಪ್ರಖ್ಯಾತ ವಿದ್ಯಾ ಕೇಂದ್ರಕ್ಕೆ ದೇಣಿಗೆ ಕೊಟ್ಟ ಉಲ್ಲೇಖವಿದೆ. ನ್ಯಾಯಾಡಳಿತವನ್ನು, ಲೋಕೋಪಕಾರದ ರೀತಿಯಲ್ಲಿ ಗೋಚರವಾಗುವಂತೆ ಅನೇಕ ಪಾರದರ್ಶಕ ಪದ್ಧತಿಗಳನ್ನು ಜಾರಿಗೆ ತಂದನು. ಭ್ರಷ್ಟಾಚಾರವನ್ನು ನಿರ್ಮೂಲನಗೊಳಿಸಿದುದೇ ಅಲ್ಲದೆ, ಅಕ್ರಮವಾಗಿ ಸರಕಾರದ ಹಣವನ್ನು ದುರುಪಯೋಗ ಮಾಡಿಕೊಂಡವರ ಮೇಲೆ ಉಗ್ರ ಕ್ರಮ ಕೈಗೊಂಡನು. ಮಹಮೂದ್ ಗವಾನನು ಹಿಂದೆ ಇದ್ದ ಸಾಮ್ರಾಜ್ಯದ ನಾಲ್ಕು ತರಫಗಳನ್ನು ಎಂಟು ತರಫಗಳನ್ನಾಗಿ ಪುನರ್‌ವಿಂಗಡಿಸಿದನು. ಇವುಗಳನ್ನು ಸರ್ ಲಷ್ಕರಿಗಳೆಂದು ಕರೆಯಲಾಗುತ್ತಿತ್ತು. ಆತನೇ ಸ್ವತಃ ಪ್ರಧಾನಮಂತ್ರಿ ಮತ್ತು ಬಿಜಾಪುರದ ತರಫದಾರನಾಗಿದ್ದನು.

ರಷ್ಯಾ ದೇಶದ ನಿಖೇಟಿನ್ ಎಂಬ ಯಾತ್ರಿಕನು ಕ್ರಿ.ಶ. ೧೪೭೦ರಲ್ಲಿ ಈ ಬಹಮನಿ ಸಾಮ್ರಾಜ್ಯಕ್ಕೆ ಭೇಟಿ ಕೊಟ್ಟು ಬೀದರ್ ಹಿಂದೂಸ್ತಾನದ ಮಹಮ್ಮದಿಯ ನಗರಗಳಲ್ಲೇ ಒಂದು ಬಹುಮುಖ್ಯ ನಗರವಾಗಿದೆ ಎಂದು ವರ್ಣಿಸಿರುವನು. ಈ ವೇಳೆಗೆ ಬಹಮನಿ ಸಾಮ್ರಾಜ್ಯವು ಪೂರ್ವದ ಸಾಗರದಿಂದ ಪಶ್ಚಿಮದ ಸಾಗರದವರೆಗೂ ವ್ಯಾಪಿಸಿತ್ತು. ಇಲ್ಲಿದ್ದಂತಹ ನಾಲ್ಕು ಮುಖ್ಯ ಪ್ರಾಂತ್ಯಗಳಲ್ಲಿ ಅಂದರೆ ಗುಲಬರ್ಗಾ, ಬೀದರ್ ಪ್ರಾಂತ್ಯಗಳನ್ನು ಮಹಮದ ಗವಾನ ಮತ್ತು ಯೂಸಫ್ ಆದಿಲ್‌ಖಾನನು ಹಾಗೂ ತೆಲಂಗಾಣ ಮತ್ತು ಬೇರಾರ್ ಪ್ರಾಂತ್ಯಗಳನ್ನು ಮಲ್ಲಿಕ್ ಹಸನ್ ನಿಜಾಮ ಉಲ್ ಮುಲ್ಕ್ ಮತ್ತು ಫತಾವುಲ್ಲಾ ಇಮಾದ್ ಉಲ್ ಮುಲ್ಕ್ ಇವುಗಳನ್ನು ತಮ್ಮ ತಮ್ಮಲ್ಲಿ ಹಂಚಿಕೊಂಡಿದ್ದರು. ಇವರಲ್ಲಿ ಯೂಸಫ್ ಆದಿಲ್‌ಖಾನನು ಪರಕೀಯನಾಗಿದ್ದ ಕಾರಣ ಅವನಿಗೆ ವಿದೇಶಿಗಳಿಂದ ಬೆಂಬಲವೂ ಇತ್ತೆಂದು ತಿಳಿದುಬರುತ್ತದೆ. ಬೆಳಗಾವಿ ಮತ್ತು ಬಂಕಾಪುರದ ರಾಜರು ಗೋವಾ ಕರಾವಳಿ ಪ್ರದೇಶವನ್ನು ಹಿಂದೂ ಸಾಮ್ರಾಜ್ಯಕ್ಕೆ ಮತ್ತೆ ಹಿಂದಿರುಗಿಸುವ ಪ್ರಯತ್ನ ಮಾಡಿದರು. ಇದನ್ನು ಅರಿತು ಮೂರನೇ ಮಹಮ್ಮದ್ ಮತ್ತು ಗವಾನ್ ಇಬ್ಬರೂ ಬಂಕಾಪುರಕ್ಕೆ ಬಂದು ತಮ್ಮ ಸಾಮ್ರಾಜ್ಯದ ಹತೋಟಿಯನ್ನು ಭದ್ರಪಡಿಸಿದರು. ಈ ಅಸ್ಥಿರತೆಯ ಸಂದರ್ಭದಲ್ಲಿ ಅನೇಕ ರಾಜಕೀಯ ಸಂಚಿಗೆ ಗವಾನನನ್ನು ಸಿಕ್ಕಿಸಿ ಕೊನೆಗೆ ಅವನನ್ನು ಕೊಂದು ಹಾಕುವಂತೆ ಸುಲ್ತಾನನಿಗೆ ಆದೇಶಿಸುವಂತೆ ಒತ್ತಡ ತರಲಾಯಿತೆಂದು ತಿಳಿದುಬರುತ್ತದೆ. ಮಹಮೂದ್ ಗವಾನನನ್ನು ೧೪೮೧ರಲ್ಲಿ ರಾಜಕೀಯ ತಂತ್ರದ ಸಂಚುಗಳಿಗೆ ಬಲಿಯಾಗಿಸಿ ದೇಶದ್ರೋಹದ ಸುಳ್ಳು ಆರೋಪದ ಮೇಲೆ ಕೊಂದು ಹಾಕಿದರು. ಗವಾನನ ಮರಣದ ನಂತರ ಬಹಮನಿ ರಾಜ್ಯ ಪತನವಾಗಲು ಮುಖ್ಯ ಕಾರಣವಾಯಿತು. ಈ ಸಂದರ್ಭವನ್ನು ಉಪಯೋಗಿಸಿಕೊಂಡು ಯೂಸಫ್ ಆದಿಲ್‌ಖಾನನು ಬೀದರ್‌ನಿಂದ ಬಿಜಾಪುರಕ್ಕೆ ಹೋದನು. ಅನಂತರ ಬಿಜಾಪುರದ ಪ್ರಬಲ ಸೇನೆಯನ್ನು ತೆಗೆದುಕೊಂಡು ಗುಲಬರ್ಗಾವನ್ನು ಸುಲಭವಾಗಿ ದಾಳಿ ಮಾಡಿ ತನ್ನ ವಶಕ್ಕೆ ತೆಗೆದುಕೊಂಡನು.

ಅಲ್ಲಿಂದ ಬಹಮನಿಯ ರಾಜ್ಯಪಾಲನನ್ನು ಹೊರಹಾಕಲಾಯಿತು. ಮೂರನೇ ಮಹಮ್ಮದ್ ಷಾನ ತರುವಾಯ ಪಟ್ಟಕ್ಕೆ ಬಂದ ನಾಲ್ಕು ಸುಲ್ತಾನರು ಒಬ್ಬರ ತರುವಾಯ ಒಬ್ಬರು ಕೇವಲ ಹೆಸರಿಗೆ ಮಾತ್ರ ಸುಲ್ತಾನರೆಂದು ಕರೆದುಕೊಂಡರು. ಬಹಮನಿಯ ೩ನೇ ಮಹಮ್ಮದ್ ಷಾಹನ ಮಗ ನಾಲ್ಕನೇ ಮಹಮ್ಮದ್ ಷಾ(೧೫೧೮-೨೦)ನ ಆಳ್ವಿಕೆಯ ಅವಧಿಯಲ್ಲಿ ರಾಜಕೀಯ ಹಾಗೂ ಆರ್ಥಿಕ ಪರಿಸ್ಥಿತಿಗಳು ತೀರಾ ಹದಗೆಟ್ಟಿತ್ತು. ಅವನು ತನ್ನ ಪಿತ್ರಾರ್ಜಿತವಾಗಿ ಬಂದಿದ್ದ ಅಮೂಲ್ಯವಾದ ಕಿರೀಟವನ್ನು ಭಾಗ ಮಾಡಿ ಮಾರಾಟ ಮಾಡಿ ಬಂದ ಹಣದಲ್ಲಿ ಜೀವನ ಸಾಗಿಸಬೇಕಾದ ಪರಿಸ್ಥಿತಿಯಿತ್ತೆಂಬ ಅಭಿಪ್ರಾಯ ತಿಳಿದುಬರುತ್ತದೆ. ಬಹಮನಿ ಸಾಮ್ರಾಜ್ಯದ ಪತನದ ಪರಿಣಾಮವಾಗಿ ಐದು ಸ್ವತಂತ್ರ ರಾಜ್ಯಗಳು ದಖ್ಖನ್ನಿನಲ್ಲಿ ಹುಟ್ಟಿಕೊಂಡವು. ಅವು,

ಅಹಮದನಗರದ ನಿಜಾಮಷಾಹಿ (೧೪೯೦)

ಬಿಜಾಪುರದ ಆದಿಲ್ ಷಾಹಿ(೧೪೯೦)

ಬಿರಾರಿನ ಇಮಾದ್‌ಷಾಹಿ (೧೪೯೦)

ಗೋಲ್ಕೊಂಡದ ಕುತುಬ್‌ಷಾಹಿ (೧೫೧೮)

ಬೀದರ್‌ನ ಬರೀದ್ ಷಾಹಿ (೧೫೨೮)

ಈ ರೀತಿ ಬಹಮನಿ ಸಾಮ್ರಾಜ್ಯವು ಒಡೆದು ಐದು ಭಾಗಗಳಾಗಿ ವಿಂಗಡನೆಗೊಂಡು ಸ್ವತಂತ್ರವಾದವು. ಸ್ವತಂತ್ರಗೊಂಡ ರಾಜ್ಯಗಳೆಂದರೇ ಪ್ರಮುಖವಾಗಿ ಮೂರು ರಾಜ್ಯಗಳು ಮಾತ್ರ. ಅವು ಅಹಮದನಗರ, ಬಿಜಾಪುರ ಮತ್ತು ಗೋಲ್ಕೊಂಡ. ಇವು ರಾಜ್ಯದ ವಿಸ್ತರಣೆಗಾಗಿ ಯುದ್ಧಗಳನ್ನು ಕೈಗೊಂಡವು.

### ಬಿಜಾಪುರದ ಆದಿಲ್‌ಷಾಹಿಗಳ ಉದಯ (೧೪೯೦-೧೬೮೯)

ಬಹಮನಿ ಸಾಮ್ರಾಜ್ಯವು ಪತನಗೊಂಡ ನಂತರ ಅಸ್ತಿತ್ವಕ್ಕೆ ಬಂದ ಐದು ಪ್ರಮುಖ 'ಷಾಹಿ' ರಾಜ್ಯಗಳಲ್ಲಿ ಬಿಜಾಪುರವು ಒಂದಾಗಿದೆ. ಇವರು ಸುಮಾರು ಎರಡು ಶತಮಾನಗಳ ಕಾಲ ಉತ್ತಮವಾದ ಆಳ್ವಿಕೆಯನ್ನು ನೀಡಿದರು. ಅವರ ಆಳ್ವಿಕೆಯು ಮಧ್ಯಯುಗದ ಇತರ ಕೆಲವು ಘಟನೆಗಳೊಂದಿಗೆ ಹೊಂದಿಕೆಯಾಗಿದ್ದವು. ಈ ದೇಶದ ಇತಿಹಾಸದಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸಿದ್ದ ಮೊಘಲ್ ಸಾಮ್ರಾಜ್ಯಕ್ಕೆ ಉತ್ತರಭಾರತದಲ್ಲಿ ಬಾಬರನು ಅಸ್ತಿಭಾರ ಹಾಕಿದನು. ದಕ್ಷಿಣದಲ್ಲಿ ವಿಜಯನಗರ ಸಾಮ್ರಾಜ್ಯವು ಬಲಿಷ್ಠವಾಗಿತ್ತು. ಆದರೆ ಬಹುಬೇಗನೆ ಅವನತಿ ಹೊಂದಲಿತ್ತು. ಅದೇ ಸಮಯದಲ್ಲಿ ಪೋರ್ಚುಗೀಸರು ಗೋವಾ ಗೆದ್ದು ಈ ಮಣ್ಣಿನ ಮೇಲೆ ಕಾಲಿಟ್ಟರು. ಭಾರತದಲ್ಲಿ ಪಾಶ್ಚಿಮಾತ್ಯ ವಸಾಹತುಶಾಹಿಯ ನೂತನಯುಗವನ್ನು ಅವರು ಆರಂಭಿಸಿದರು. ಮೊಗಲ್ ಚಕ್ರವರ್ತಿಯಾದ ಔರಂಗಜೇಬನ ಮಿತಿಯೇ ಇಲ್ಲದ ದುರಾಸೆಯಿಂದ ದಖ್ಖಿನ್ನಲ್ಲಿ ದೀರ್ಘಕಾಲದ ಯುದ್ಧ ನಡೆಸುವಂತೆ ಪ್ರಚೋದಿಸಿ, ಅದು ಷಾಹಿ ರಾಜ್ಯಗಳ ಮೇಲೂ ಮೊಗಲ್ ಸಾಮ್ರಾಜ್ಯದ ಮೇಲೂ ಮಾದಕ ಪರಿಣಾಮಗಳನ್ನು ಉಂಟುಮಾಡಿತು. ಉದ್ವೇಗಕರ ರಾಜಕೀಯ ಘಟನೆಗಳು ಉತ್ತರ-ದಕ್ಷಿಣಗಳೆರಡರಲ್ಲೂ ಮಹತ್ವಪೂರ್ಣವಾದ ಸಾಂಸ್ಕೃತಿಕ ಪ್ರಗತಿಯೊಂದಿಗೆ ಸರಿಹೆಜ್ಜೆ ಹಾಕಿದವು. ಮೊಗಲ್ ವೈಭವವು ಮಾನವ ಜನಾಂಗಕ್ಕೆ ತಾಜ್‌ಮಹಲ್ ನಂತಹ ಅದ್ಭುತ ಭವ್ಯ ಕಲಾಕೃತಿಯನ್ನು ನೀಡಿದರೆ, ಆದಿಲ್ ಷಾಹಿಗಳೂ ಕಲೆಯಲ್ಲಿ ಪಾರಮ್ಯವನ್ನು ಸಾಧಿಸಿ ಗೋಲ್‌ಗುಂಬಜ್ ನಂತಹ ಅಪೂರ್ವ ಸ್ಮಾರಕವನ್ನು ಕೊಡುಗೆಯಾಗಿತ್ತರು. ಇನ್ನೂ ಹೆಚ್ಚು ಮಹತ್ವದ ಸಂಗತಿಯೆಂದರೆ, ಆ ಕಾಲದ ಉದಾರ ಪ್ರವೃತ್ತಿ. ಅದು ಹಿಂದೂ-ಮುಸ್ಲಿಂ ಸಾಮರಸ್ಯ, ರಾಷ್ಟ್ರೀಯ ಭಾವೈಕ್ಯ ಮತ್ತು ಸಮಗ್ರ ಸಮ್ಮಿಶ್ರ ಸಂಸ್ಕೃತಿಗಳಲ್ಲಿ ಫಲಿತವಾಯಿತು. ಅದೇ ಬಿಜಾಪುರದ ಆದಿಲ್‌ಶಾಹಿಗಳ ಮುಖ್ಯ ಲಕ್ಷಣವಾಯಿತು.

### ಬಿಜಾಪುರದ ಆದಿಲ್‌ಷಾಹಿಗಳ ರಾಜಕೀಯ ಚರಿತ್ರೆ

#### ಯೂಸುಫ್ ಆದಿಲ್‌ಖಾನ್

ಯೂಸುಫ್ ಆದಿಲ್‌ಖಾನನು ಬಿಜಾಪುರ ಆದಿಲ್‌ಷಾಹಿ ವಂಶದ ಸ್ಥಾಪಕನಾಗಿದ್ದನು. ಇವನು ಮೊದಲು ಬಹಮನಿಯ ಪ್ರಾಂತಪಾಲನಾಗಿ ಬಿಜಾಪುರದಲ್ಲಿದ್ದನು. ಆದರೆ ಇವನು ದಿಢೀರನೆ ತನ್ನನ್ನು ಸುಲ್ತಾನನೆಂದು ಘೋಷಿಸಿಕೊಳ್ಳಲಿಲ್ಲ. ವಾಸ್ತವಾಗಿ ೧೫೩೫ರಲ್ಲಿ ಪಟ್ಟಕ್ಕೆ ಬಂದ ನಾಲ್ಕನೆಯ ದೊರೆ ೧ನೇ ಇಬ್ರಾಹಿಂ ಆದಿಲ್ ಷಾಹನವರೆಗೂ ಯಾರೂ ಔಪಚಾರಿಕವಾಗಿ 'ಷಾಹ' ಅಥವಾ 'ಸುಲ್ತಾನ' ಎಂಬ ಹೆಸರನ್ನಿಟ್ಟುಕೊಂಡಿರಲಿಲ್ಲ. ಯೂಸುಫ್ ಅಸಾಧಾರಣ ಸಾಮರ್ಥ್ಯದ ವ್ಯಕ್ತಿ. ಮಹಮೂದ್ ಗವಾನನಂತೆಯೇ ಅವನೂ ಇರಾನಿನಿಂದ ಬಂದನು.

ಇವನು ಕ್ರಿ.ಶ. ೧೪೬೦ರಲ್ಲಿ 'ಇರಾನಿ'ನಿಂದ 'ದಾಬೋಲ್ ಬಂದರಿನ' ಮೂಲಕ ಬೀದರ್ ಕೋಟೆಯ ಕಡೆ ಬಂದನು.[೯] ಆದರೆ ಫೆರಿಸ್ತಾನ ಪ್ರಕಾರ "ಯೂಸುಫ್ ಆದಿಲ್‌ಖಾನ್ ಮೂಲತಃ ಟರ್ಕಿ ಸುಲ್ತಾನ ಎರಡನೆಯ ಮುರಾದನ ಮಗನಾಗಿದ್ದನು. ಮುರಾದನು ಕ್ರಿ.ಶ. ೧೪೫೧ರಲ್ಲಿ ಮರಣ ಹೊಂದಿದನು. ಅವನ ಹಿರಿಯ ಮಗ ಮುಹಮ್ಮದನು ಅವನ ಉತ್ತರಾಧಿಕಾರಿಯಾಗಿ ಸಿಂಹಾಸನಕ್ಕೆ ಬಂದನು. ಅವನ ತಾಯಿ ಅಪಾರ ಜಾಣ್ಮೆಯಿಂದ ಅವನೂ ಬದುಕಿಕೊಂಡನು, ಯೂಸುಫ್‌ನ ಜಾಗದಲ್ಲಿ ಕೊಲ್ಲಲು ಒಬ್ಬ ಗುಲಾಮ ಹುಡುಗನನ್ನು ಆಕೆ ಬದಲಾಯಿಸಿಟ್ಟಳು. ಮಗನನ್ನು ಒಬ್ಬ ಪರ್ಷಿಯನ್ ವ್ಯಾಪಾರಿಯ ಸಹಾಯದೊಂದಿಗೆ ಪರ್ಷಿಯಕ್ಕೆ ಕಳುಹಿಸಿಬಿಟ್ಟಳು. ಅಲ್ಲಿ ಅವನನ್ನು ರಹಸ್ಯವಾಗಿ ಬೆಳೆಸಲಾಯಿತು. ಅವನು ಹದಿನೇಳನೆಯ ವಯಸ್ಸಿನಲ್ಲಿ ಅಲ್ಲಿಂದ ಭಾರತಕ್ಕೆ ಬಂದನು. ಇಲ್ಲಿ ಅವನನ್ನು ಜಾರ್ಜಿಯದ ಗುಲಾಮನೆಂದು ಬಹಮನಿಯ ಮಂತ್ರಿಯಾಗಿದ್ದ ಮಹಮೂದ್ ಗವಾನನಿಗೆ ವಿಕ್ರಯಿಸಲಾಯಿತು. ಫೆರಿಸ್ತಾನ ಬರವಣಿಗೆಯ ಪ್ರಕಾರ ಈ ಕಥೆಯನ್ನು ಅವನೂ ಸತ್ಯವೆಂದು ಒಪ್ಪಿದ್ದನೆಂದು ಭಾಸವಾಗುತ್ತದೆ.[೧೦] ಯೂಸುಫ್‌ನು ಬಾಲ್ಯದಲ್ಲಿ ವಿಪರೀತ ಕಷ್ಟಪಟ್ಟವನಂತೆ ಫೆರಿಸ್ತಾನು ನಿರೂಪಿಸಿದ್ದಾನೆ. ಯೂಸುಫ್ ನಿಜವಾಗಿಯೂ ಸಮರ್ಥನಾದ ವ್ಯಕ್ತಿ. ಮಹಮೂದ್ ಗವಾನನ ವಿಶ್ವಾಸವನ್ನು ಗಳಿಸಿ ಸ್ಥಾನದಿಂದ ಸ್ಥಾನಕ್ಕೆ ಮೇಲೇರುತ್ತಾ ಹೋದನು. ಯೋಧನಾಗಿ ಮತ್ತು ಆಡಳಿತಗಾರನಾಗಿ ಯೂಸುಫ್ ಎಷ್ಟು ಉತ್ತಮ ರೀತಿಯಲ್ಲಿ ಆಡಳಿತ ನಿರ್ವಹಿಸಿದನೆಂದರೆ, ಬೇಗನೆ ಗವರ್ನರ್ ದರ್ಜೆಗೆ ಏರಿದನು. ಗವಾನನ ಅತಿ ಆಪ್ತನಾಗಿದ್ದು ಅವನ ಕೈಕೆಳಗೆ ನೇರವಾಗಿ ತರಬೇತಿ ಪಡೆದು, ರಾಜಕೀಯ ಪಕ್ಷಗಳ ಕಷ್ಟ ಕೋಟಲೆಗಳನ್ನು ತಾನೇ ನೋಡಿ ಯೂಸುಫ್ ಆತ್ಮರಕ್ಷಣೆಯ ತಂತ್ರವನ್ನು ಚೆನ್ನಾಗಿ ಕರಗತ ಮಾಡಿಕೊಂಡನು.

ಬೀದರಿನ ಆಸ್ಥಾನದ ಅನಿಶ್ಚಿತ ರಾಜಕಾರಣಕ್ಕೆ ಸಿಕ್ಕಿ ತನ್ನ ಜೀವನವನ್ನು ಅಪಾಯಕ್ಕೊಡ್ಡುವುದಕ್ಕಿಂತಲೂ ತನ್ನ ಪ್ರಾಂತವಾದ ಬಿಜಾಪುರದಲ್ಲಿ ಭದ್ರವಾಗಿ ಸ್ಥಾಪನೆಗೊಳ್ಳುವುದೇ ವಿವೇಕ ಎಂದು ಅವನು ಭಾವಿಸಿದನು. ಮಹಮೂದ್ ಗವಾನನ ಕೊಲೆಯಾದ ಮೇಲೆ ಅವನು ಸುಲ್ತಾನನಿಂದ ದೂರ ಉಳಿದನು. ಮಹಮೂದನ ಪಟ್ಟಾಭಿಷೇಕವಾದಾಗಲೂ ಕೂಡ ಯೂಸುಫ್ ನಗರದ ಹೊರಭಾಗದಲ್ಲಿಯೇ ಉಳಿದುಕೊಂಡನು. ಕ್ರಿ.ಶ. ೧೪೯೦ರಲ್ಲಿ ಅಹಮದ್ ನಿಜಾಮ್-ಉಲ್-ಮುಲ್ಕನು ಅಹಮದನಗರದಲ್ಲಿ ತನ್ನದಾಗಿಯೇ ಒಂದು ಪ್ರತ್ಯೇಕವಾದ ಸ್ವತಂತ್ರ ಸಂಸ್ಥಾನವನ್ನು ಕಟ್ಟಿಕೊಂಡುದು ಯೂಸುಫ್‌ನ ಕಣ್ಣೆದುರಿಗಿದ್ದ ಆದರ್ಶವಾಗಿತ್ತು. ಮಹಮೂದ್ ಗವಾನನ ಕೊಲೆಯು ಒಂದು ಮುಖ್ಯವಾದ ತಿರುವಾಯಿತು. ಸಾಮಂತ ರಾಜರು ರಾಜ್ಯವನ್ನು ವಿಭಜಿಸಬೇಕೆಂದು ಹೆಚ್ಚು ಹೆಚ್ಚಾಗಿ ಒತ್ತಾಯಿಸುವ ನೂತನ ಪ್ರವೃತ್ತಿ ಕಾಣಿಸಿಕೊಂಡಿತು. ಯೂಸುಫ್‌ನು ಆಸ್ಥಾನದಲ್ಲಿ ಸಂಭವಿಸಿದ ಘಟನೆಗಳಿಂದ ತತ್ತರಿಸಿ ಹೋಗಿದ್ದ ಅಫಕಿ ಪಕ್ಷದ ಪ್ರತಿನಿಧಿಯಾಗಿದ್ದನು. ಹೊಸದಾಗಿ ಬಂದವರು ಯೂಸುಫ್‌ನ ಬೆನ್ನ ಹಿಂದೆ ಬಲವಾಗಿ ನಿಂತರು. ತಮ್ಮ ಅಧಿಕಾರವನ್ನು ಬೇರೆಲ್ಲಾದರೂ ಸದ್ದಿಲ್ಲದೆ ಬೆಳೆಸಿಕೊಳ್ಳುವುದರಿಂದ ಮಾತ್ರವೇ ತಾವು ಜೀವ ಸಹಿತ ಉಳಿಯುವುದು ಸಾಧ್ಯ ಎಂದು ಅವರಿಗೆ ಮನವರಿಕೆಯಾಗಿತ್ತು. ಈ ಸಮಯದಲ್ಲಿ ಬಿಜಾಪುರದಲ್ಲಿ ಸುಮಾರು ೫೦೦೦ ಜನ ಹೊರಗಿನಿಂದ ಬಂದವರಿದ್ದರು. ಅವರೆಲ್ಲರೂ ಸಂಪೂರ್ಣವಾಗಿ ಯೂಸುಫನಿಗೆ ನಿಷ್ಠೆಯಿಂದಿದ್ದರು. ಅವನನ್ನು ತಮ್ಮ ಸುಲ್ತಾನನೆಂದು ಅಂಗೀಕರಿಸಲು ಅವರು ಸಿದ್ಧರಾಗಿದ್ದರು.

ಆಸೆ ಹಾಗೂ ಸುಭದ್ರತೆಯ ಆಕಾಂಕ್ಷೆ ಇವು ನೂತನ ಸಾಹಸಕ್ಕೆ ಕೈಹಾಕುವಂತೆ ಅವನನ್ನು ಪ್ರೇರೇಪಿಸಿದವು. ಕ್ರಿ.ಶ. ೧೪೯೦ರಲ್ಲಿ ಅವನು ಶುಕ್ರವಾರದ ಖುತ್ಬಾ ಅಥವಾ ಧರ್ಮೋಪದೇಶವನ್ನು ತನ್ನ ಹೆಸರಿನಲ್ಲಿ ಪಠಿಸುವಂತೆ ಮಾಡಿದನು.[೧೩] ಅದು ಸಾರ್ವಭೌಮತ್ವವನ್ನು ವಹಿಸಿಕೊಂಡವರ ಕುರುಹಾಗಿತ್ತು. ೧೪೮೧ರಲ್ಲಿ ಗವಾನನು ಕೊಲೆಯಾದಾಗಿನಿಂದ ೧೪೯೦ರಲ್ಲಿ ಸುಲ್ತಾನನೆಂದು ಹೇಳಿಕೊಳ್ಳುವವರೆಗೆ, ಒಂಬತ್ತು ವರ್ಷ ನೂತನ ರಾಜ್ಯ ಸ್ಥಾಪನೆಗೆ ಸಿದ್ಧತೆಯ ಅವಧಿಯಾಗಿತ್ತು. ಅವನು 'ಷಹಾ' ಎಂಬ ಹೆಸರನ್ನು ಇಟ್ಟುಕೊಳ್ಳಲಿಲ್ಲ ಆಸ್ಥಾನದ ಎಲ್ಲ ಸಮಾರಂಭಗಳಲ್ಲೂ ಪ್ರಾಂತೀಯ ನಿಷ್ಠ ಗವರ್ನರ್‌ನಂತೆ ನಡೆದುಕೊಂಡನು. ಅಗತ್ಯವಾದಾಗಲೆಲ್ಲ ಸುಲ್ತಾನನಿಗೆ ನೆರವು ಸಲ್ಲಿಸಿದನು. ಆದರೂ ವಾಸ್ತವದಲ್ಲಿ ಅವನು ಸ್ವತಂತ್ರನಾಗಿದ್ದನು.

ಯೂಸುಫ್ ಆದಿಲ್‌ಖಾನ್ ಏಳಿಗೆಯನ್ನು ಸಹಿಸದ ಬಹಮನಿ ಸಾಮ್ರಾಜ್ಯದ ಪ್ರಧಾನಿ ಟರ್ಕ್ ಮೂಲದ ಖಾಸಿಂ ಬರೀದನು, ಯೂಸುಫ್‌ನನ್ನು ಅಶಕ್ತಗೊಳಿಸಲು, ವಿಜಯನಗರದ ಅರಸನಾದ ನರಸಿಂಹ ಹಾಗೂ ಗೋವಾದ ಗವರ್ನರ್ ಬಹದ್ದೂರ್ ಗಿಲಾನಿಯನ್ನು ಯೂಸುಫ್‌ನ ವಿರುದ್ಧ ಆಕ್ರಮಣ ಮಾಡುವಂತೆ ಪ್ರಚೋದಿಸುವ ನೀತಿಯನ್ನು ಅನುಸರಿಸಿದನು. ವಿಜಯನಗರಕ್ಕೆ ರಾಯಚೂರು ಪ್ರದೇಶ ಪಡೆಯಲು ಒಳ್ಳೆಯ ಅವಕಾಶವಾಗಿತ್ತು ಏಕೆಂದರೆ ಕ್ರಿ.ಶ.೧೪೪೩ರಿಂದಲೂ ರಾಯಚೂರು ಪ್ರದೇಶವು ಬಹಮನಿ ರಾಜ್ಯಕ್ಕೆ ಸೇರಿತ್ತು. ಅದನ್ನು ವಶಪಡಿಸಿಕೊಳ್ಳಲು ಹಲವಾರು ವಿಫಲ ಪ್ರಯತ್ನಗಳಾಗಿದ್ದವು. ಕ್ರಿ.ಶ. ೧೪೯೦ರ ನಂತರ ಅದು ಆದಿಲ್‌ಷಾಹಿ ರಾಜ್ಯಗಳ ಭಾಗವಾಯಿತು. ಕ್ರಿ.ಶ. ೧೪೯೨ರಲ್ಲಿ ದಿಢೀರನೆ ವಿಜಯನಗರವು ರಾಯಚೂರು ಪ್ರದೇಶವನ್ನು ವಶಪಡಿಸಿಕೊಳ್ಳಲು, ಖಾಸಿಂ ಬರೀದನು ಕಳಿಸಿದ ಸೂಚನೆ ದೈವದತ್ತ ಅವಕಾಶ ಎಂದು ಭಾವಿಸಿತು. ಯೂಸುಫ್‌ನ ಕಷ್ಟಕ್ಕೆ ಇನ್ನೊಂದು ಹೊಸ ವಿಪತ್ತು ಸೇರಿತು. ಅದು ಬಹದ್ದೂರ್ ಗಿಲಾನಿಯು ಜಮಖಂಡಿಯನ್ನು ಬಹು ಸುಲಭವಾಗಿ ವಶಪಡಿಸಿಕೊಂಡದ್ದು. ಖಾಸಿಂನು ಈ ಆಟವನ್ನು ನೋಡುತ್ತಾ ಕುಳಿತಿದ್ದನು. ಎರಡು ರಂಗಗಳಲ್ಲಿ ಒಟ್ಟಿಗೆ ಯುದ್ಧ ನಡೆದವು. ಯೂಸುಫ್‌ನಿಗೆ ಕಷ್ಟವಾಯಿತು. ಅದರಲ್ಲೂ ಖಾಸಿಂ ವೈರಿಗಳ ಪಕ್ಷದಲ್ಲಿದ್ದಾಗ ನಿಜವಾದ ಖಳನಾಯಕ ಖಾಸೀಮನೇ ಎಂಬುದು ಯೂಸುಫ್‌ನಿಗೆ ಗೊತ್ತಾಯಿತು. ಮೊದಲು ಅವನಿಗೆ ಪಾಠ ಕಲಿಸಬೇಕಾಗಿತ್ತು. ಅದಕ್ಕಾಗಿ ವಿಜಯನಗರದೊಂದಿಗೆ ಹಾಗೂ ಬಹದ್ದೂರ್ ಗಿಲಾನಿಯೊಂದಿಗೆ ಸಂಧಿ ಮಾಡಿಕೊಂಡನು. ಜಮಖಂಡಿಯನ್ನು ಬಹಾದ್ದೂರ್ ಗಿಲಾನಿಗೂ ಬಿಟ್ಟುಕೊಟ್ಟನು.[೧೪] ಆಮೇಲೆ ಯೂಸುಫ್‌ನು ೮೦೦೦ ಅಶ್ವಸೇನೆಯೊಂದಿಗೆ ಖಾಸಿಂನ ಕಡೆಗೆ ನಡೆದನು. ಬೀದರ್‌ನ ಹೆಬ್ಬಾಗಿಲಿನ ಮುಂದೆ ನಿಂತನು. ಆದರೆ ಯೂಸುಫ್ ಆಕ್ರಮಣ ಮಾಡುವುದಕ್ಕೆ ಮೊದಲೇ ಖಾಸಿಂ ಓಡಿಹೋದನು. ದಂಡಯಾತ್ರೆ ಯಶಸ್ವಿಯಾಯಿತು. ಖಾಸಿಂ ಎಷ್ಟು ಅಸಹಾಯಕನಾದನೆಂದರೆ ಅಲ್ಲಿಂದ ಮುಂದಕ್ಕೆ ಯೂಸುಫ್‌ನ ತಂಟೆಗೆ ಹೋಗಲಿಲ್ಲ.

ಯೂಸುಫ್‌ನ ಅದೃಷ್ಟಕ್ಕೆ ವಿಜಯನಗರವು ಬಹಳ ಕಾಲ ದೋ ಅಬ್ ಪ್ರದೇಶವನ್ನು ತನ್ನ ವಶದಲ್ಲಿಟ್ಟುಕೊಳ್ಳಲಾಗಲಿಲ್ಲ. ಏಕೆಂದರೆ ಕ್ರಿ.ಶ. ೧೪೯೩ರಲ್ಲಿ ವಿಜಯನಗರದಲ್ಲಿ ನರಸಿಂಹನ ವಿರುದ್ಧ ದಂಗೆಯೆದ್ದಿತು. ಅದೇ ಸಮಯದಲ್ಲಿ ಅರಸನ ವಿರುದ್ಧ ಜನರೇ ಯೂಸುಫ್‌ನಿಗೆ ಅವನ ಪ್ರದೇಶವನ್ನು ಮರಳಿ ಪಡೆಯಲು ಸಹಾಯ ಮಾಡುತ್ತಿದ್ದರು. ಯೂಸುಫ್ ದಿಢೀರನೆ ದೋ ಅಬ್ ಅನ್ನು ಆಕ್ರಮಿಸಿದನು.

ವಿಜಯನಗರವು ರಕ್ಷಿಸಿಕೊಳ್ಳಲಾರದೇ ಅದನ್ನು ಒಪ್ಪಿಸಿಕೊಟ್ಟಿತು. ಕ್ರಿ.ಶ. ೧೪೯೩ರ ಏಪ್ರಿಲ್‌ನಲ್ಲಿ ಮತ್ತೆ ದೋ ಅಬ್ ಪ್ರದೇಶ ಯೂಸುಫ್‌ನ ಕೈ ಸೇರಿತು. ಈಗ ಯೂಸುಫ್‌ನ ಕತ್ತಿಯ ಹರಿತವನ್ನು ಸವಿಯುವ ಸರದಿ ಬಹದ್ದೂರ್ ಗಿಲಾನಿಯದಾಗಿತ್ತು. ಅವನು ಕರಾವಳಿ ಪ್ರದೇಶದಲ್ಲಿ ಬಲಿಷ್ಠ ನೌಕಾದಳದೊಂದಿಗೆ ಗುಜರಾತಿನ ಸುಲ್ತಾನ ಮಹಮೂದ್ ಷಹಾ ಬೇಗಾರಾನಿಗೆ ತೊಂದರೆ ನೀಡಲಾರಂಭಿಸಿದನು. ಬಹಮನಿ ರಾಜ್ಯದೊಂದಿಗೆ ಗುಜರಾತ್ ಮೈತ್ರಿಯುತ ಸಂಬಂಧಗಳನ್ನು ಹೊಂದಿತ್ತು. ಹಾಗಾಗಿ ಬಹದ್ದೂರ್ ಗಿಲಾನಿಯ ಮೇಲೆ ಸೂಕ್ತ ಕ್ರಮ ಕೈಗೊಳ್ಳುವಂತೆ ಮಹಮೂದ್ ಷಾಹ ಬೇಗಾರಾ ಬಹಮನಿ ಅಸ್ಥಾನಕ್ಕೆ ಮನವಿ ಮಾಡಿಕೊಂಡನು. ಗುಜರಾತಿನ ಸುಲ್ತಾನನಿಗೆ ಸಹಾಯ ಮಾಡಲು ಖಾಸಿಂನಿಗೆ ಇಷ್ಟ ಇರಲಿಲ್ಲ. ಹಾಗಾಗಿ ಗಿಲಾನಿಯನ್ನು ದಂಡಿಸಲು ಅಹಮದನಗರ ಮತ್ತು ಬಿಜಾಪುರಗಳ ನೆರವು ಕೇಳಿದನು. ಅಹಮದನಗರವು ಈ ಕರೆಗೆ ಬೆಲೆ ಕೊಡಲಿಲ್ಲ. ಯೂಸುಫನಂತೂ ಖಾಸಿಂನ ಜೊತೆ ಸೇರುತ್ತಿರಲಿಲ್ಲ ಆದರೆ ಇದು ಬಹದ್ದೂರ್ ಗಿಲಾನಿಯನ್ನು ಬಗ್ಗು ಬಡಿಯಲು ಸದವಕಾಶವಾಗಿತ್ತು. ಆದ್ದರಿಂದ ಆ ಕೆಲಸವನ್ನು ತಾನೇ ಸ್ವತಂತ್ರವಾಗಿ ಕೈಗೆತ್ತಿಕೊಂಡನು. ಅವನನ್ನು ಎದುರಿಸಲಾರದೆ ಗಿಲಾನಿಯು ತಾನು ಗಳಿಸಿದ್ದೆಲ್ಲವನ್ನು ಯೂಸುಫನಿಗೆ ಒಪ್ಪಿಸಬೇಕಾಯಿತು. ದಾಭೋಲ್‌ನಲ್ಲಿ ಆಶ್ರಯ ಪಡೆದು ಸಂಧಿಯನ್ನು ಯಾಚಿಸಿದನು. ಕ್ರಿ.ಶ. ೧೪೯೪ರಲ್ಲಿ ಗುಜರಾತ್ ಸುಲ್ತಾನನ ಕ್ಷಮೆ ಕೋರಿ, ಜಮಖಂಡಿಯನ್ನು ಯೂಸುಫನಿಗೆ ಒಪ್ಪಿಸಿ, ತನ್ನ ಮೂಲ ಜಹಗೀರನ್ನಷ್ಟೇ ಉಳಿಸಿಕೊಂಡು ಅದರಲ್ಲೇ ತೃಪ್ತಿಪಟ್ಟುಕೊಳ್ಳಬೇಕಾಯಿತು.

ಕ್ರಿ.ಶ.೧೪೯೫ರ ವೇಳೆಗೆ ಯೂಸುಫ್‌ನು ತನ್ನ ವಿರೋಧಿಗಳೆಲ್ಲರನ್ನು ನಾಶ ಮಾಡಿ ತನ್ನ ಸ್ಥಾನವನ್ನು ಭದ್ರ ಮಾಡಿಕೊಂಡನು. ರಾಜ್ಯದ ವಿಸ್ತರಣೆ ಮತ್ತು ಸಂಘಟನೆ ಇನ್ನೂ ಆಗಬೇಕಾಗಿತ್ತು. ೧೪೯೫ರಲ್ಲಿ ಈ ಕೆಲಸಕ್ಕೆ ಯೂಸುಫ್‌ನು ಗಮನ ಹರಿಸಿ ಗೋವಾ, ದಾಭೋಲ್, ಗುಲಬರ್ಗಾಗಳಿಗೆ, ಸಹ್ಯಾದ್ರಿ ಪರ್ವತಶ್ರೇಣಿಯ ಪೂರ್ವದವರೆಗೆ ತನ್ನ ರಾಜ್ಯವನ್ನು ವಿಸ್ತರಿಸಿದನು. ಯೂಸುಫ್‌ನು ಮರಾಠ ಸರದಾರ ಮುಕುಂದರಾವ್‌ನನ್ನು ಸೋಲಿಸಿ ಅವನ ಸೋದರಿಯನ್ನು ವಿವಾಹವಾದನು. ಇಸ್ಮಾಯಿಲ್ ಆದಿಲ್‌ಖಾನ್ ಅವನ ಏಕ ಮಾತ್ರ ಮಗನಾಗಿದ್ದನು. ಯೂಸುಫ್‌ನ ಮಣ್ಣಿನ ಕೋಟೆಯಿಂದಾವೃತ್ತವಾಗಿದ್ದ ಬಿಜಾಪುರವನ್ನು ವಿಸ್ತರಿಸಿ, ೪೨ ಎಕರೆಗಳಷ್ಟು ಪ್ರದೇಶವನ್ನೊಳಗೊಂಡಂತೆ ಕಲ್ಲಿನ ಕೋಟೆಯನ್ನು ನಿರ್ಮಿಸಿದನು. ಪಟ್ಟಣದಲ್ಲಿ ಮೂರು ತೋಟಗಳನ್ನು ರೂಪಿಸಿ, ತೋಟಗಾರಿಕೆಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದ ಸುಲ್ತಾನನು, ತೋಟಗಳಿಗೆ ನೀರು ಒದಗಿಸಲೆಂದೇ ಕಾಲುವೆಯನ್ನು ನಿರ್ಮಿಸಿದನು. ಯೂಸುಫ್‌ನು ಸಾಹಿತ್ಯ ಪ್ರೇಮಿಯಾಗಿದ್ದು, ಸಂಗೀತದಲ್ಲೂ ಸಾಧಕನಾಗಿದ್ದನು. ಇವನು ತಂಬೂರಿ ಹಾಗೂ 'ಉದ' ವಾದ್ಯಗಳಲ್ಲಿ ಪರಿಣತನಾಗಿದ್ದು, ಸ್ವತಃ ಗಾಯಕನಾಗಿದ್ದನು. ಈತನ ಆಸ್ಥಾನವು ಪರ್ಷಿಯಾ ಹಾಗೂ ಇತರ ಭಾಗದ ಸಾಹಿತಿಗಳಿಂದ, ಸಂಗೀತಗಾರರಿಂದ ತುಂಬಿತ್ತು. ಇವನ ಆಳ್ವಿಕೆಗೆ ಸಂಬಂಧಿಸಿದಂತೆ ಈವರೆಗೆ ಎರಡು ಶಾಸನಗಳು ವರದಿಯಾಗಿದ್ದು, ಅವುಗಳಲ್ಲೊಂದು ಮುಲ್ಲಾ ಹರ್ಬುಜಾನು ಕೊತ್ತಲವೊಂದನ್ನು ನಿರ್ಮಿಸಿದ ವಿಷಯವನ್ನು ದಾಖಲಿಸಿದರೆ, ಬಿಜಾಪುರದ ಮ್ಯೂಸಿಯಂನಲ್ಲಿರುವ ಇನ್ನೊಂದು ಶಾಸನ ೧೫೦೦ರಲ್ಲಿ ಅಹಮದಾಬಾದ್ ಹಾಗೂ ತಾಳಿಕೋಟೆ ಠಾಣೆಗಳ ಮಾಮಲೆದಾರನಾದ ಗಾಲಿಬಖಾನರು ಸಮಸ್ತ ಮಹಾನಾಡಿನ ಗೌಡ, ಪಟ್ಟಣ ಸೆಟ್ಟಿಗಳನ್ನು ಉದ್ದೇಶಿಸಿ ವಿವಿಧ ಕರಗಳನ್ನು

ನಿಗದಿಪಡಿಸಿದನೆಂಬುದನ್ನು ಕೌಲು ಶಾಸನ ತಿಳಿಸುತ್ತದೆ.[೧೮] ಹೀಗೆ ಬಿಜಾಪುರ ರಾಜ್ಯದ ಸ್ಥಾಪನೆಗೆ ಶ್ರಮಿಸಿದ ಯೂಸುಫ್ ಆದಿಲ್‌ಖಾನನು ೧೫೧೦ರಲ್ಲಿ ಮರಣ ಹೊಂದಿದನು.

**ಇಸ್ಮಾಯಿಲ್ ಆದಿಲ್‌ಖಾನ್ (೧೫೧೦-೩೪)**

ಯೂಸುಫ್‌ನ ಮರಣದ ನಂತರ ಅವನ ಮಗ ಇಸ್ಮಾಯಿಲ್‌ನು ೧೫೧೦ರಲ್ಲಿ ಬಿಜಾಪುರದ ಗದ್ದುಗೆಯನ್ನು ಅಲಂಕರಿಸಿದರು. ಇಸ್ಮಾಯಿಲ್‌ನು ಇನ್ನೂ ಬಾಲಕನಾಗಿದ್ದರಿಂದ ಕಾಮಿಲ್‌ಖಾನನು ಅವನ ಪ್ರತಿನಿಧಿಯಾಗಿ ರಾಜ್ಯದ ಪೂರ್ಣ ಹೊಣೆ ಹೊರಬೇಕಾಯಿತು. ಯೂಸುಫ್‌ನಿಂದ ಪರಾಜಿತಗೊಂಡಿದ್ದ ಪೋರ್ಚುಗೀಸ್ ಗವರ್ನರ್ ಅಲ್ಬುಕರ್ಕ್‌ನು, ಸುಲ್ತಾನನ ಮರಣ ವಾರ್ತೆ ತಿಳಿದು ಗೋವೆಗೆ ಮುತ್ತಿಗೆ ಹಾಕಲು ಹೊಂಚು ಹಾಕುತ್ತಿದ್ದನು. ಬಾಲಕ ಇಸ್ಮಾಯಿಲ್ ಆದಿಲ್‌ಖಾನನ ಸಿಂಹಾಸನ ಆರೋಹಣ ಸಮಾರಂಭದಲ್ಲಿ ಭಾಗವಹಿಸಲೆಂದು ಗೋವೆಯಲ್ಲಿದ್ದ ಬಿಜಾಪುರದ ಸೇನಾ ತುಕಡಿ, ಬಿಜಾಪುರಕ್ಕೆ ಹೊರಟಿತು. ಈ ಸಂದರ್ಭದ ಲಾಭ ಪಡೆದ ಅಲ್ಬುಕರ್ಕ್‌ನು, ನವೆಂಬರಿನಲ್ಲಿ ಮುತ್ತಿಗೆ ಹಾಕಿ ಗೋವಾ ಪಟ್ಟಣವನ್ನು ವಶಪಡಿಸಿಕೊಂಡು, ಪೋರ್ಚುಗೀಸ್ ಆಡಳಿತಕ್ಕೆ ಅನುವು ಮಾಡಿದನು. ಜೊತೆಗೆ ದಾಭೋಲ್ ಹಾಗೂ ಸಂಗಮೇಶ್ವರ ಬಂದರುಗಳನ್ನು ವಶಪಡಿಸಿಕೊಳ್ಳಲು ಮುಂದಾದನು. ಇದರಿಂದ ಎಚ್ಚೆತ್ತ ಕಾಮಿಲ್‌ಖಾನನು ಪೋರ್ಚುಗೀಸರೊಂದಿಗೆ ಒಪ್ಪಂದ ಮಾಡಿಕೊಂಡು ಗೋವೆಯ ಮೇಲಿನ ಪೋರ್ಚುಗೀಸರ ಪರಮಾಧಿಕಾರವನ್ನು ಅಂಗೀಕರಿಸಿದನು. ಪೋರ್ಚುಗೀಸರೊಂದಿಗೆ ಒಪ್ಪಂದ ಮಾಡಿಕೊಂಡ ನಂತರ, ಕಾಮಿಲ್‌ಖಾನ್ ಆಂತರಿಕ ವ್ಯವಹಾರಗಳ ಕಡೆಗೆ ಗಮನ ಹರಿಸಿದನು. ಅಫಕಿಗಳು ಮತ್ತು ದಖ್ಖನಿಗಳ ಬಿಕ್ಕಟ್ಟು ಇನ್ನೂ ಮುಂದುವರಿದಿತ್ತು. ಯೂಸುಫ್ ನು ಷಿಯಾ ಪಂಥಕ್ಕೆ ಪರಿವರ್ತನೆ ಆಗಿದ್ದು, ಹೊಸದೊಂದು ವಿವಾದವನ್ನು ಸೃಷ್ಟಿಸಿತು. ಈ ಪರಿಸ್ಥಿತಿಯನ್ನು ತಿಳಿಗೊಳಿಸುವ ಸಲುವಾಗಿ ಕಾಮಿಲ್‌ಖಾನನು ಸುನ್ನಿ ಪಂಥಕ್ಕೆ ಮರಳಿದನು. ಸುನ್ನಿ ಆಚರಣೆಗಳನ್ನು ನಡೆಸಿದನು. ಶುಕ್ರವಾರದ ಪ್ರಾರ್ಥನಾ ಸಭೆಯಲ್ಲಿ ನಾಲ್ವರು ಖಲೀಫರ ಹೆಸರಿನಲ್ಲಿ ಧರ್ಮೋಪದೇಶ ಮಾಡುವ ಪದ್ಧತಿ ಜಾರಿಗೆ ತಂದನು. ಅಫಕಿಗಳ ವಿರುದ್ಧವಾಗಿ ಅವನು ತೀವ್ರವಾದ ಕ್ರಮಗಳನ್ನು ಕೈಗೊಂಡನು. ಅನೇಕ ಅಧಿಕಾರಿಗಳು ತಮ್ಮ ಸ್ಥಾನವನ್ನು ಕಳೆದುಕೊಂಡರು. ಆ ಪದವಿಗಳನ್ನು ಕಾಮಿಲ್‌ಖಾನನ ಪಕ್ಷದವರಿಗೆ ಕೊಡಲಾಯಿತು. ಕಾಮಿಲ್‌ಖಾನನು ತನ್ನ ಸ್ಥಾನ ಭದ್ರಪಡಿಸಿಕೊಂಡ ನಂತರ ಅವನ ಆಸೆ ರಾಜಪ್ರತಿನಿಧಿ ಅಧಿಕಾರದಿಂದ ತೃಪ್ತಿಯಾಗಲಿಲ್ಲ. ಸುಲ್ತಾನನ ಸ್ಥಾನ ಬಾಚಿಕೊಳ್ಳಲು ಅವನು ಬಯಸಿದನು. ಆದ್ದರಿಂದ ಅಫಕಿ ಪಕ್ಷವನ್ನು ದಮನ ಮಾಡಿದನು. ಅಮೀರ್ ಬರೀದನಲ್ಲಿ ಅವನು ತನ್ನ ಆಸೆಗೆ ಇಂಬುಗೊಡುವ ಮಿತ್ರನನ್ನು ಕಂಡನು. ಇಬ್ಬರೂ ಸೇರಿ ಇಸ್ಮಾಯಿಲ್‌ನನ್ನು ನಿವಾರಿಸಲು ಒಂದು ಹಂಚಿಕೆ ಹಾಕಿದರು. ಅದರಂತೆ ಕಾಮಿಲ್‌ಖಾನನು ಬಿಜಾಪುರದ ಸುಲ್ತಾನನಾಗಬೇಕು ಹಾಗೂ ಅಮೀರ್ ಬರೀದನು ಬೀದರ್‌ನಲ್ಲಿ ಸುಲ್ತಾನನಾಗಬೇಕು. ಕಾಮಿಲ್ ತನ್ನ ಹಂಚಿಕೆಯಂತೆ ಮುಂದುವರೆದು ಇಸ್ಮಾಯಿಲ್‌ನನ್ನು ಮತ್ತು ಅವನ ತಾಯಿ 'ದಿಲ್‌ಷಾದ್ ಆಗಾಳನ್ನೂ' ಗೃಹಬಂಧನದಲ್ಲಿರಿಸಿ ಶೋಲಾಪುರವನ್ನು ವಶಪಡಿಸಿಕೊಳ್ಳಲು ಆ ಕಡೆಗೆ ಹೊರಟನು. ಇದನ್ನು ತನ್ನ ಕಾರ್ಯಾಚರಣೆಯ ಕೇಂದ್ರವನ್ನಾಗಿ ಮಾಡಿಕೊಳ್ಳಲು ಬಯಸಿದನು. ಶೋಲಾಪುರದ ಗವರ್ನರ್ ಜಿಯಾನ್‌ಖಾನ್

ತನ್ನ ಪ್ರದೇಶವನ್ನು ಕೆಲವು ಕಾಲ ರಕ್ಷಿಸಿಕೊಂಡನು. ಆದರೆ ಹೆಚ್ಚು ದಿನಗಳ ಕಾಲ ಉಳಿಸಿಕೊಳ್ಳಲಾಗಲಿಲ್ಲ. ಕಾಮಿಲ್‌ಖಾನನು ಅದನ್ನು ಕೈವಶಪಡಿಸಿಕೊಂಡು ಬಿಜಾಪುರಕ್ಕೆ ಹಿಂದಿರುಗಿದನು. ೧೫೧೧ ಏಪ್ರಿಲ್‌ನಲ್ಲಿ ತಾನೇ ಸುಲ್ತಾನನಾಗಬೇಕೆಂದು ತನಗಿರುವ ಆಸೆಯನ್ನು ತನ್ನ ಅನುಯಾಯಿಗಳೆದುರಿಗೆ ತಿಳಿಸಿ ಅವರ ಸಲಹೆ ಕೇಳಿದನು. ಬಹು ಜಾಗರೂಕತೆಯಿಂದಲೂ ರಹಸ್ಯದಿಂದಲೂ ಕೆಲಸ ಮಾಡುವಂತೆ ಅವರು ಸಲಹೆ ನೀಡಿದರು. ಆದರೆ ಇವನ ಉದ್ದೇಶವು ರಾಜಮಾತೆಗೆ ತಿಳಿಯಿತು. ಅದಕ್ಕಿದ್ದ ಏಕೈಕ ಪರಿಹಾರ ಕಾಮಿಲ್‌ಖಾನನನ್ನು ಸಾಯಿಸುವುದು. ಆದರೆ ಅವನು ಎಲ್ಲ ಕಡೆಯೂ ತನ್ನ ಜನರನ್ನು ನೇಮಿಸಿಕೊಂಡಿದ್ದುದರಿಂದ ಅದು ಬಹಳ ಕಷ್ಟದ ಕೆಲಸವಾಗಿತ್ತು. ಆಗ ರಾಜಮಾತೆ ದಿಲ್‌ಷಾದ್ ಆಗಾಳ ಒಂದು ಉಪಾಯವನ್ನು ಮಾಡಿದಳು. ಯೂಸುಫ್ ಟರ್ಕ್ ಎಂಬ ಒಬ್ಬ ಸಿಪಾಯಿಗೆ ಕಾಮಿಲ್‌ಖಾನನನ್ನು ಕಂಡರೆ ಬದ್ಧದ್ವೇಷವಿತ್ತು.[೧೮] ಅವನನ್ನು ವಿಶ್ವಾಸಕ್ಕೆ ತೆಗೆದುಕೊಂಡು ಕಾಮಿಲ್‌ಖಾನನ ದುಷ್ಟಯೋಜನೆಯನ್ನು ಅವನಿಗೆ ತಿಳಿಸಿ ಕಾಮಿಲ್‌ನನ್ನು ಕೊಲ್ಲಲು ಅವನ ನೆರವನ್ನು ಕೇಳಲಾಯಿತು. ರಾಜಮಾತೆಗೋಸ್ಕರವಾಗಿ ಏನನ್ನೂ ಮಾಡಲು ಯೂಸುಫ್ ಸಿದ್ಧವಿದ್ದನು. ಇಬ್ಬರೂ ಸಂಧಿಸುವಂತೆ ಮಾಡುವುದು ಹೇಗೆ ಎನ್ನುವುದು ಸಮಸ್ಯೆಯಾಯಿತು. ಇದೇ ಸಂದರ್ಭದಲ್ಲಿ ಕಾಮಿಲ್‌ಖಾನನು ಮೆಕ್ಕಾಕ್ಕೆ ಹೋಗುವುದಾಗಿ ಹೇಳಿದನು. ಸಾಂಪ್ರದಾಯಿಕವಾಗಿ ಇಸ್ಮಾಯಿಲ್‌ಖಾನನನ್ನು ಬೀಳ್ಕೊಟ್ಟು ಕಾಮಿಲ್‌ಖಾನ್‌ನಿಂದ ವೀಳೆಯ ಪಡೆಯಲೆಂದು ಯೂಸುಫ್ ಹೋದನು. ಅವನು ಸಕಲ ಸನ್ನದ್ಧನಾಗಿ ಹೋಗಿ ಕಾಮಿಲ್‌ಖಾನನನ್ನು ಇರಿದು ಕೊಂದನು.[೨೦] ಕಾವಲಿನವರು ಯೂಸುಫ್‌ನನ್ನು ಬಿಡಲಿಲ್ಲ. ಅವನನ್ನು ಸಾಯಿಸಿದರು. ಆದರೆ, ರಾಣಿಯ ಉದ್ದೇಶ ಪೂರೈಸಿತು. ಕಾಮಿಲ್‌ಖಾನನ ಸಾವಿನ ನಂತರ ರಾಜಧಾನಿ ಬಿಜಾಪುರದಲ್ಲಿ ಅಂತಃಕಲಹ ಬುಗಿಲೆದ್ದಿತು. ಕಾಮಿಲ್‌ಖಾನನ ಮಗ ಸಫದಾರಖಾನನು ತಾಯಿಯ ಒತ್ತಾಯಕ್ಕೆ ಮಣಿದು, ದಖ್ಖನಿ ಸರದಾರರೊಂದಿಗೆ ವಿಜಾಪುರದ ಕೊತ್ತಲಕ್ಕೆ ಮುತ್ತಿಗೆ ಹಾಕಿದನು. ದಿಲ್‌ಷಾದ್ ಆಗಾಳ ಮುಂದಾಳತ್ವದಲ್ಲಿ ಸಫದಾರಖಾನನ ದಾಳಿಯನ್ನು ರಾಜ ಸೈನ್ಯ ಎದುರಿಸುತ್ತಿದ್ದಾಗ ಸಫದಾರಖಾನನು ಹತನಾದರು. ಇದರೊಂದಿಗೆ ಅಂತಃಕಲಹವು ಅಂತ್ಯಗೊಂಡಿತು.[೨೧]

ಇಸ್ಮಾಯಿಲ್ ಆದಿಲ್‌ಖಾನನು ಸೇವೆಯಲ್ಲಿದ್ದ ದಖ್ಖನಿ ಹಾಗೂ ಅಬಿಸೀನಿಯನ್ ಸರದಾರರನ್ನು ವಜಾ ಮಾಡಿದನು. ವಿಜಾಪುರದಿಂದ ಖಾನದೇಶ ಮುಂತಾದೆಡೆಗಳಿಗೆ ಓಡಿಹೋಗಿದ್ದ ಅಫಕಿ ಸರದಾರರನ್ನು ರಾಜಧಾನಿಗೆ ಕರೆಸಿಕೊಂಡು, ಸೂಕ್ತ ಸ್ಥಾನಮಾನ ನೀಡಿದನು. ಷಿಯಾ ಧರ್ಮಾಚರಣೆಯನ್ನು ಮತ್ತೆ ಜಾರಿಗೆ ತಂದನು. ಕಾಮಿಲ್‌ಖಾನ್, ಸಫದಾಖಾನನನ್ನು ಸದೆಬಡಿಯುವಲ್ಲಿ ಮಹತ್ವದ ಪಾತ್ರ ವಹಿಸಿದ್ದ 'ಮಹಮದ್ ಲಾಹರಿಗೆ' ಅಸಧಖಾನ ಎಂಬ ಬಿರುದಿನೊಂದಿಗೆ ಬೆಳಗಾವಿ ಜಹಗೀರನ್ನೂ ನೀಡಿ ಸನ್ಮಾನಿಸಲಾಯಿತು. ಹೀಗೆ ಬಿಜಾಪುರ ಆಂತರಿಕ ಗೊಂದಲದಲ್ಲಿ ಸಿಲುಕಿದಾಗ, ಪೋರ್ಚುಗೀಸ್ ಗವರ್ನರ್ ಅಲ್ಬುಕರ್ಕ್ ಹಾಗೂ ಬೀದರ್‌ನ ಅಮೀರ್ ಬರೀದನ ಪ್ರಚೋದನೆಯಿಂದಾಗಿ, ವಿಜಯನಗರದ ಅರಸ ಕೃಷ್ಣದೇವರಾಯನು ರಾಯಚೂರು ದೋ ಅಬ್ ಪ್ರದೇಶವನ್ನು ಬಿಜಾಪುರದ ಸುಲ್ತಾನನಿಂದ ಸ್ವಾಧೀನಪಡಿಸಿಕೊಳ್ಳಲು ೧೫೧೨ರಲ್ಲಿ ಮುಂದಾದನು. ಬೃಹತ್ ಸೈನ್ಯದೊಂದಿಗೆ ತುಂಗಭದ್ರೆಯನ್ನು ದಾಟಿ ರಾಯಚೂರು ಕೋಟೆಗೆ ಮುತ್ತಿಗೆ ಹಾಕಿ, ಹೆಚ್ಚು ಪ್ರತಿರೋಧವಿಲ್ಲದೆ

ವಶಪಡಿಸಿಕೊಳ್ಳುವಲ್ಲಿ ಯಶಸ್ವಿಯಾದನು. ಕೃಷ್ಣದೇವರಾಯನು ಗುಲಬರ್ಗಾದತ್ತ ಮುನ್ನಡೆದು, ಆ ಕೋಟೆಯನ್ನು ಸತತವಾಗಿ ಎಂಟು ತಿಂಗಳ ಸಂಘರ್ಷದ ನಂತರ ವಶಪಡಿಸಿಕೊಂಡನು. ಮುಂದೆ ಬೀದರನ್ನು ವಶಪಡಿಸಿಕೊಂಡು ಬಹಮನಿ ಸುಲ್ತಾನನ್ನು ೧೫೧೮ರಲ್ಲಿ ಸೆರೆಯಿಂದ ಬಿಡಿಸಿ, ಪಟ್ಟಕಟ್ಟಿ 'ಯವನರಾಜ್ಯ ಸ್ಥಾಪನಾಚಾರ್ಯ'ಎಂಬ ಬಿರುದನ್ನು ಕೃಷ್ಣದೇವರಾಯ ಧರಿಸಿದನು. ಆದರೆ ಬಿಜಾಪುರ ರಾಜ್ಯದ ಹಿನ್ನಡೆಗೆ ರಾಜಕೀಯ ಹುನ್ನಾರ ನಡೆಸುತ್ತಿದ್ದ ಅಮೀರ್ ಬರೀದನು ಹಿಂದೆ ಬಿಜಾಪುರದಿಂದ ವಶಪಡಿಸಿಕೊಂಡಿದ್ದ ಗುಲಬರ್ಗಾ ಪ್ರದೇಶದ ಮೇಲೆ, ಇಸ್ಮಾಯಿಲ್ ಆದಿಲ್‌ಖಾನನು ದಾಳಿ ಮಾಡಿ ಪುನಃ ವಶಪಡಿಸಿಕೊಂಡನು ಅಮೀರ್ ಬರೀದನು ವಿಜಾಪುರದ ವಿರುದ್ಧ ಸೇಡು ತೀರಿಸಿಕೊಳ್ಳುವುದಕ್ಕಾಗಿ ನಾಮಕಾವಸ್ಥೆ ಸುಲ್ತಾನ ಮಹಮೂದನಿಂದ ಒಂದು ಫರ್ಮಾನ್ ಬರೆಸಿ ನೆರೆಯ ರಾಜ್ಯಗಳು ಬಿಜಾಪುರದ ವಿರುದ್ಧ ತನಗೆ ಸಹಾಯ ಮಾಡಬೇಕೆಂದು ಕೋರಿದನು. ಅಹಮದನಗರದಲ್ಲಿ ಬರ್ಹಾನ ನಿಜಾಂಷಹಾ ಇನ್ನೂ ಅಪ್ರಾಪ್ತವಯಸ್ಕನಾಗಿದ್ದನು. ಅಲ್ಲಿ ಮುಕಮಲ್‌ಖಾನ ಅವನ ರೀಜೆಂಟ್ ಆಗಿದ್ದನು. ಇವನು ಕಾಮಿಲ್‌ಖಾನನ ಮಿತ್ರನಾಗಿದ್ದುದರಿಂದ ಸಂತೋಷವಾಗಿ ಅವನು ಸೇರಿದನು. ಸುಲ್ತಾನ ಕುಲೀ ಕುತುಬ್‌ಷಹಾ ಕೂಡ ಅಮೀರ್ ಬರೀದನಿಗೆ ಸಹಾಯ ಮಾಡಲು ಬಯಸಿದನು. ಇದರಿಂದ ೧೫೧೮ರಲ್ಲಿ ಬೀದರ್, ಅಹಮದನಗರ ಮತ್ತು ಗೋಲ್ಕೊಂಡಗಳ ಜಂಟಿ ಸೇನೆಯು ಬಿಜಾಪುರದ ಮೇಲೆ ಆಕ್ರಮಣ ಮಾಡಿತು. ಅಸದ್‌ಖಾನ ಅದನ್ನು ಎದುರಿಸಲು ಶಕ್ತನಾಗಿದ್ದನು. ಅಮೀರ್‌ಬರೀದ್ ಸೈನ್ಯವು ಹಿಮ್ಮೆಟ್ಟಬೇಕಾಯಿತು. ಮಹಮೂದ್ ಷಹಾ ಬಹಮನಿ ಮತ್ತು ಅವನ ಮಗ ಅಹಮದ್ ಅಸದ್‌ಖಾನನ ಕೈಗೆ ಸೆರೆ ಸಿಕ್ಕಿದರು. ಆದರೆ ಅವರನ್ನು ತುಂಬಾ ಗೌರವದಿಂದ ನಡೆಸಿಕೊಂಡು ಸತ್ಕರಿಸಲಾಯಿತು. ಬಾಲಕ ಸುಲ್ತಾನ ಇಸ್ಮಾಯಿಲ್‌ನೂ ಸುಲ್ತಾನನನ್ನೂ ಗೌರವಿಸಿದನು ಮತ್ತು ಅವರಿಬ್ಬರನ್ನೂ ಸಕಲ ಮರ್ಯಾದೆಗಳಿಂದ ಬೀದರಿಗೆ ಕಳಿಸಿಕೊಡಲಾಯಿತು. ಆದರೆ ಅಲ್ಲಿ ಹೋಗಿ ಅವರು ಬರೀದ್‌ನ ಕೈಗೆ ಸಿಕ್ಕಿ ಸೆರೆಯಾಳುಗಳಾಗಿ ಜೀವನವನ್ನು ಕಳೆಯಬೇಕಾಯಿತು.

ಮುಂದೆ ಇಸ್ಮಾಯಿಲ್ ಮತ್ತೆ ದೋ ಅಬ್ ಪ್ರದೇಶವನ್ನು ಗೆಲ್ಲಲು ೧೫೨೦ರಲ್ಲಿ ೭೦೦೦ ಅಶ್ವದಳದೊಂದಿಗೆ ಹೊರಟನು. ಇವನ ಜೊತೆಗೆ ಅಸದ್‌ಖಾನ ಮತ್ತು ಮಿರ್ಜಾ ಜಹಾಂಗೀರ್ ಸೇರಿಕೊಂಡು ಕೃಷ್ಣಾನದಿಯ ದಂಡೆಯ ಮೇಲೆ ಶಿಬಿರ ಹೂಡಿದರು. ಸರಿಯಾಗಿ ವ್ಯೂಹರಚನೆ ಮಾಡಿಕೊಳ್ಳದೆ ತರುಣ ಇಸ್ಮಾಯಿಲ್ ನದಿಯನ್ನು ದಾಟಿದನು. ಆದರೆ ಕೃಷ್ಣದೇವರಾಯನ ಉತ್ತಮವಾದ ಸೈನ್ಯವು ಅವರನ್ನು ಸೋಲಿಸಿತು. ಆದ್ದರಿಂದ ಇಸ್ಮಾಯಿಲ್‌ನು ಹಿಮ್ಮೆಟ್ಟಬೇಕಾಯಿತು. ಈ ಪ್ರದೇಶಗಳನ್ನು ವಶಪಡಿಸಿಕೊಳ್ಳುವ ವಿಚಾರವನ್ನು ಸದ್ಯಕ್ಕೆ ಕೈ ಬಿಡಲಾಯಿತು. ಕೃಷ್ಣದೇವರಾಯನಿಗೆ ಪ್ರಚೋದನೆ ನೀಡಿದ ಅಮೀರ್ ಬರೀದನಿಗೆ ತಕ್ಕ ಶಾಸ್ತಿ ಮಾಡುವ ಕಡೆಗೆ ಗಮನ ಕೊಡಬೇಕೆಂದು ಅಸದ್‌ಖಾನ ಸಲಹೆ ನೀಡಿದನು. ದೋಅಬ್ ಪ್ರದೇಶವನ್ನು ಗೆಲ್ಲುವವರೆಗೂ ಮದ್ಯಪಾನ ಮಾಡುವುದಿಲ್ಲವೆಂದು ಇಸ್ಮಾಯಿಲ್ ಪ್ರತಿಜ್ಞೆ ಮಾಡಿದನು. ತೀರ್ಮಾನ ಕೈಗೊಂಡಿದ್ದು ಮದ್ಯದ ಅಮಲಿನಲ್ಲಿದ್ದಾಗಲೇ. ಪಂಜಿಂ ಆಸುಪಾಸಿನಲ್ಲಿ ಪೋರ್ಚುಗೀಸರು ತಮ್ಮ ರಾಜ್ಯ ವಿಸ್ತಾರಕ್ಕೆ ಕೈ ಹಾಕಿದ್ದರು. ಇಸ್ಮಾಯಿಲ್‌ನು ಬಿಜಾಪುರ ಸೈನ್ಯವನ್ನು ಕಳಿಸಿ ಅವರು ಪೊಂಡಾ ಕಡೆಗೆ ಮುಂದುವರಿಯದಂತೆ ಮಾಡಿದ್ದಲ್ಲದೆ, ಪೋರ್ಚುಗೀಸರು ಹೊಸದಾಗಿ ಗೆದ್ದುಕೊಂಡಿದ್ದ ಭಾಗಗಳನ್ನು ಕಸಿದುಕೊಂಡನು. ಆಮೇಲೆ ಇಸ್ಮಾಯಿಲ್ ಅಮಿರ್

ಬರೀದ್‌ನ ಕಡೆಗೆ ಗಮನ ಹರಿಸಿದನು. ಅಹಮದನಗರದೊಂದಿಗೆ ಮೈತ್ರಿ ಬೆಳೆಸಿಕೊಳ್ಳಬೇಕೆಂದು ಅಸದ್‌ಖಾನ ಸಲಹೆಕೊಟ್ಟನು.

ಅದರಂತೆ ಇಸ್ಮಾಯಿಲ್‌ನು ಶೋಲಾಪುರದಲ್ಲಿ ಬರ್ಹಾನ್ ನಿಜಾಂ ಷಾಹನನ್ನು ಸಂಧಿಸಿದನು. ಮೊದಲು ಒಂದು ವೈವಾಹಿಕ ಸಂಬಂಧವನ್ನು ನಿರ್ಧರಿಸಲಾಯಿತು. ಅದು ಇಸ್ಮಾಯಿಲ್‌ನ ಸಹೋದರಿ 'ಮರಿಯಮ್‌ಳನ್ನು' ಬರ್ಹಾನ್‌ನಿಗೆ ಮದುವೆ ಮಾಡಿಕೊಡುವುದು. ಶೋಲಾಪುರವೇ ವಿವಾಹದ ಬಳುವಳಿಯಾಗಿ ಬರ್ಹಾನ್‌ನಿಗೆ ನೀಡಲು ತೀರ್ಮಾನವಾಯಿತು. ೧೫೨೪ ಮೇ ತಿಂಗಳು ಪೂರ್ತಿಯಾಗಿ ವಿವಾಹ ಸಮಾರಂಭ ನಡೆಯಿತು.[೨೨] ಆದರೆ ಈ ಮೈತ್ರಿ ಹೆಚ್ಚು ಕಾಲ ನಿಲ್ಲಲಿಲ್ಲ. ಸಂಬಂಧಗಳು ಮತ್ತೆ ಕಹಿಯಾದವು. ಮಹತ್ವದ ಆಸಕ್ತಿಗಳು ಘರ್ಷಿಸಿದಾಗ ತೋರಿಕೆಯ ಮೈತ್ರಿ ಕೆಲಸ ಮಾಡಲಿಲ್ಲ. ಏಕೆಂದರೆ ಮೊದಲು ಒಪ್ಪಂದದಂತೆ ಶೋಲಾಪುರವನ್ನು ತನಗೆ ಒಪ್ಪಿಸಬೇಕೆಂದು ಬರ್ಹಾನ್ ಕೇಳಿದ್ದಾಗ ಇಸ್ಮಾಯಿಲ್‌ನು ಅದಕ್ಕೆ ಸಮ್ಮತಿಸದಿದ್ದಾಗ ಅವನ ಸಹೋದರಿಯನ್ನು ಅಪಮಾನಿಸಿದನು. ಹಾಗೂ ಬೀದರ್ ಮತ್ತು ಬೀರಾರ್‌ಗಳೊಂದಿಗೆ ಮೈತ್ರಿ ಬೆಳೆಸಿಕೊಂಡು, ಶೋಲಾಪುರದ ಮೇಲೆ ಅವನು ಮುತ್ತಿಗೆ ಹಾಕಲು ಮುಂದೆ ಬರುತ್ತಿರುವಾಗ ಇತ್ತ ಅಸದ್‌ಖಾನನೊಂದಿಗೆ ಇಸ್ಮಾಯಿಲ್‌ನೂ ಸೈನ್ಯದೊಂದಿಗೆ ನಡೆದನು. ಆದರೆ ಬೀರಾರಿನ ಇಮಾದುಲ್ ಮುಲ್ಕ್‌ನು ತಟಸ್ಥನಾಗಿದ್ದನು. ಅವನ ಸಹಾನುಭೂತಿ ಬಿಜಾಪುರದ ಕಡೆಗಿತ್ತು. ಶಕ್ತಿ ಸಮತೋಲನವನ್ನು ಆಧರಿಸಿ ಮೈತ್ರಿಗಳು ಬದಲಾದವು. ಏಕೆಂದರೆ ನಿಜಾಂ ಷಾಹನ ಅಧಿಕಾರವು ವಿಸ್ತಾರಗೊಳ್ಳುವುದು ಬೀರಾರಿನ ಸುಲ್ತಾನನಿಗೆ ಇಷ್ಟವಿರಲಿಲ್ಲ. ಈ ಮೊದಲನೆಯ ಯುದ್ಧದಲ್ಲಿ ಬರ್ಹಾನ್ ಸೋತನು. ಇಮಾದುಲ್ ಮುಲ್ಕ್‌ನು ರಂಗದಿಂದ ಹಿಂದಕ್ಕೆ ಸರಿಯಲು ಇಷ್ಟು ಸಾಕಾಯಿತು. ಬರ್ಹಾನ್‌ನಿಗೆ ಇಸ್ಮಾಯಿಲ್‌ನು ಸರಿಯಾಗಿ ಪಾಠ ಕಲಿಸಿದ್ದನು. ಇದು ಆದಿಲ್‌ಷಾಹಿಗಳ ಗೆಲುವಿನ ದಿನವಾಯಿತು.

ಯುದ್ಧದಿಂದ ಹಿಂದಿರುಗಿ ಬಂದ ಮೇಲೆ ಇಸ್ಮಾಯಿಲ್‌ನು ಬೀದರ್‌ನ ಅಮೀರ್ ಬರೀದನ ಮೇಲೆ ಸೇಡು ತೀರಿಸಿಕೊಳ್ಳಲು ಅವಕಾಶಕ್ಕಾಗಿ ಕಾಯುತ್ತಿದ್ದನು. ಏಕೆಂದರೆ ಈ ಹಿಂದೆ ಅಂದರೆ ವಿಜಯನಗರದ ಅರಸನಾದ ಕೃಷ್ಣದೇವರಾಯನಿಗೆ ದೋ ಅಬ್ ಪ್ರದೇಶವನ್ನು ಆಕ್ರಮಿಸುವಂತೆ ವಿಜಯನಗರವನ್ನು ಪ್ರಚೋದಿಸಿದ್ದನು. ಇನ್ನೂ ಅಫಕಿಗಳ ವಿರುದ್ಧ ವೈರವನ್ನು ಮಸೆಯುತ್ತಿದ್ದನು. ಅವರು ಷಿಯಾಗಳಾಗಿದ್ದರೆ ಅವನ ಕ್ರೋಧ ಹೆಚ್ಚುತ್ತಿತ್ತು. ಇಸ್ಮಾಯಿಲ್ ಸೂಕ್ತ ಅವಕಾಶಕ್ಕಾಗಿ ಕಾಯುತ್ತಿದ್ದನು.

ಬೀರಾರಿನ ಇಮಾದುಲ್ ಮುಲ್ಕ್ ಹಾಗೂ ಅಹಮದನಗರದ ನಿಜಾಮುಲ್‌ಮುಲ್ಕ್ ಇಬ್ಬರೂ ಬಿಜಾಪುರದೊಂದಿಗೆ ಮೈತ್ರಿ ಮಾಡಿಕೊಂಡರು. ಹಾಗಾಗಿ ಅಮೀರ್ ಬರೀದ್ ಈಗ ಒಂಟಿಯಾಗಿದ್ದನು. ಇದೇ ಸರಿಯಾದ ಅವಕಾಶವೆಂದು ಅರಿತು ಇಸ್ಮಾಯಿಲ್‌ನು ೧೦.೦೦೦ ಸೈನ್ಯದೊಂದಿಗೆ ಬೀದರ್‌ನ ಮೇಲೆ ದಂಡೆತ್ತಿ ಹೊರಟನು. ಅಮೀರ್‌ಬರೀದ್‌ನಿಗೆ ಅವನನ್ನು ಎದುರಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ ಅವನು ಉದಗೀರ್‌ಗೆ ಪಲಾಯನ ಮಾಡಿ ಗೋಲ್ಕೊಂಡದ ಸಹಾಯವನ್ನು ಕೋರಿದನು. ಆದರೆ ಕುತುಬ್‌ಷಾಹನು ಸಹಾಯ ಮಾಡಲು ಬರುತ್ತಿರುವ ದಾರಿಯಲ್ಲೇ ಅಸದ್‌ಖಾನನು ಅಡ್ಡ ಹಾಕಿ ಹಿಂದಕ್ಕಟ್ಟಿದನು. ಆಗ ಅಮೀರ್‌ನು ಬೀರಾರಿನ ನೆರವು

ಕೋರಿದನು. ಅಲ್ಲಾವುದ್ದೀನ್ ಇಮಾದುಲ್‌ಮುಲ್ಕ್‌ನ ಕರೆಗೆ ಓಗೊಟ್ಟು ರಂಗಕ್ಕೆ ಬಂದನು. ಆದರೆ ಯುದ್ಧ ಮಾಡಲಿಕ್ಕಾಗಿಯಲ್ಲ ಸಂಧಿ ಮಾಡಿಸುವ ವಿಷಯವಾಗಿ. ಇಸ್ಮಾಯಿಲ್ ಯಾವುದೇ ರಾಜಿ ಮಾಡಿಕೊಳ್ಳಲು ಸಿದ್ಧನಿರಲಿಲ್ಲ. ಅಮೀರ್‌ನಿಗೆ ಕಟುವಾದ ಪಾಠ ಕಲಿಸುವ ದೃಢ ಸಂಕಲ್ಪ ಮಾಡಿದನು. ಇನ್ನೊಂದು ಸಾರಿ ಶಾಂತಿಗಾಗಿ ಪ್ರಯತ್ನ ಮಾಡಬೇಕೆಂದು ಅಮೀರನು ಅಲ್ಲಾವುದ್ದೀನನನ್ನು ಒಲಿಸಿದನು. ಇದು ಫಲಕಾರಿಯಾಗಲಿಲ್ಲ. ಆದ್ದರಿಂದ ಹತಾಶನಾಗಿ ಮಿತಿ ಮೀರಿ ಕುಡಿಯತೊಡಗಿದನು. ಅಸದ್‌ಖಾನನು ಅಮೀರನ ಶಿಬಿರದ ಮೇಲೆ ಅನಿರೀಕ್ಷಿತ ದಾಳಿ ಮಾಡಿ ಅವನಿಗೆ ಆದಿಲ್‌ಷಾಹಿ ಶಿಬಿರಕ್ಕೆ ಹೊತ್ತುಕೊಂಡು ಹೋದನು. ಆದರೆ ಅಸದ್‌ಖಾನನ ಮನವೀಯ ಮೇರೆಗೆ ಅಮೀರ್‌ನ ಪ್ರಾಣವನ್ನು ಉಳಿಸಲಾಯಿತು. ಅಮೀರ್‌ನ ಮಗ ಶರಣಾಗತನಾಗಲು ಮೊದಲು ಒಪ್ಪಲಿಲ್ಲ. ಆದರೆ ಹಾಗೆ ಮಾಡದೇ ಹೋದರೆ ತನ್ನ ತಂದೆಯನ್ನು ಆನೆಯ ಕಾಲಿಗೆ ಕೊಟ್ಟು ತುಳಿಸುತ್ತಾರೆ ಎಂದು ತಿಳಿದಾಗ, ಅವನು ಅಸಹಾಯಕನಾಗಿ ಬೀದರ್‌ನ ಇಸ್ಮಾಯಿಲ್‌ನಿಗೆ ಕಪ್ಪವನ್ನು ಒಪ್ಪಿಸಲಾಯಿತು. ಬರೀದನು ಎಪ್ಪತ್ತು ಸಾವಿರ ಹೊನ್ನುಗಳನ್ನು ಕೊಡಬೇಕಾಯಿತು ಮತ್ತು ಬಿಜಾಪುರದ ಅಮೀರನಾಗಿ ಇರಬೇಕಾಯಿತು. ಮುಂದೆ ರಾಯಚೂರಿನ ಮೇಲೆ ನಡೆಸುವ ದಂಡಯಾತ್ರೆಯಲ್ಲಿ ಇಸ್ಮಾಯಿಲ್‌ನಿಗೆ ತಾನು ಸಹಾಯ ಮಾಡುವುದಾಗಿ ಒಪ್ಪಿಕೊಂಡನು.[೨೨]

ಅಮೀರ್ ಬರೀದ್‌ನನ್ನು ದಂಡಿಸಿದ ಮೇಲೆ ಇಸ್ಮಾಯಿಲ್ ದೋ ಅಬ್ ಪ್ರದೇಶ ವಶಪಡಿಸಿಕೊಳ್ಳುವ ಕಡೆಗೆ ಗಮನ ಹರಿಸಿದನು. ಷಾಹಿರಾಜ್ಯಗಳಿಂದ ಬಿಜಾಪುರಕ್ಕೆ ಯಾವ ಅಪಾಯವೂ ಆಗುವಂತಿರಲಿಲ್ಲ. ಏಕೆಂದರೆ ಈಗ ಬರ್ಹಾನ್, ಅಲ್ಲಾವುದ್ದೀನ್ ಅಮೀರ್, ಕೊನೆಗೆ ಕುಲಿ ಕುತುಬ್ ಷಾಹ ಕೂಡ ಇಸ್ಮಾಯಿಲ್‌ನೊಂದಿಗೆ ಸದ್ಭಾವನೆಯಿಂದಿದ್ದರು. ಹಾಗಾಗಿ ಇಸ್ಮಾಯಿಲ್ ರಾಯಚೂರಿಗೆ ಮುತ್ತಿಗೆ ಹಾಕಲು ಯೋಜನೆ ಹಾಕಿದನು. ಅಷ್ಟೊತ್ತಿಗಾಗಲೇ ವಿಜಯನಗರದ ಕೃಷ್ಣದೇವರಾಯನು ಮರಣ ಹೊಂದಿದನು. ಅವನ ಸಹೋದರ ಅಚ್ಯುತರಾಯನ ದುರ್ಬಲತೆಯ ಚಿಹ್ನೆಗಳು ಕಾಣುತ್ತಿದ್ದವು. ೧೫೩೦ರ ಪ್ರಾರಂಭದಲ್ಲಿ ಇಸ್ಮಾಯಿಲ್‌ನು ಮಿತ್ರರಾದ ಅಲ್ಲಾವುದ್ದೀನ್ ಮತ್ತು ಅಮೀರ್ ಬರೀದನೊಂದಿಗೆ ರಾಯಚೂರು ಮತ್ತು ಮುದಗಲ್ಲುಗಳನ್ನು ಕಷ್ಟವಿಲ್ಲದೆಯೇ ವಶಪಡಿಸಿಕೊಂಡನು. ಅದನ್ನು ಒಂದು ದೊಡ್ಡ ವಿಜಯೋತ್ಸವವಾಗಿ ಆಚರಿಸಿದನು.[೨೩]

ಇಸ್ಮಾಯಿಲ್‌ನು ತನ್ನ ರಾಜಧಾನಿಗೆ ಮರಳಿದ ನಂತರ ಅವನು ಬಹುಬೇಗನೆ ಬೀದರನ್ನು ಅಮೀರ್ ಬರೀದ್‌ನಿಗೆ ಮರಳಿ ವಹಿಸಿಕೊಟ್ಟನು. ಆದರೆ ಕಲ್ಯಾಣ ಮತ್ತು ಕಂದಹಾರ್‌ಗಳನ್ನು ಬಿಜಾಪುರದ ವಶದಲ್ಲೇ ಉಳಿಸಿಕೊಳ್ಳುವುದಾಗಿ ಷರತ್ತು ಹಾಕಿದನು. ಮುಂದೆ ಇಸ್ಮಾಯಿಲ್‌ನು ಗೋಲ್ಕೊಂಡದ ಮೇಲೆ ದಂಡೆತ್ತಿ ಹೋದನು. ಬಲವಾದ ಕೋಟೆ ಕೋವಿಲ್‌ಕೊಂಡಕ್ಕೆ ಮುತ್ತಿಗೆ ಹಾಕಿದಾಗ ಕುಲಿಕುತುಬ್ ಷಹಾ ಕ್ರಮ ಕೈಗೊಂಡು ಇಸ್ಮಾಯಿಲ್‌ನನ್ನು ಹಿಮ್ಮೆಟ್ಟುವಂತೆ ಮಾಡಿದನು. ಗೋಲ್ಕೊಂಡ ರಾಜ್ಯಕ್ಕೆ ಸೇರಿದ ಯಾವುದೇ ಭಾಗವನ್ನು ವಶಪಡಿಸಿಕೊಳ್ಳುವುದು ಇಸ್ಮಾಯಿಲ್‌ನಿಗೆ ಸಾಧ್ಯವಾಗಲಿಲ್ಲ. ಸುಮಾರು ಹನ್ನೊಂದು ತಿಂಗಳ ಕಾಲ ಬಿಜಾಪುರಿಗಳು ಮುತ್ತಿಗೆ ಹಾಕಿದರೂ, ಕೋವಿಲ್‌ಕೊಂಡವನ್ನು ಗೆಲ್ಲಲಾರದೆ ಹೋದರು. ಮುತ್ತಿಗೆಯನ್ನು ಮುಂದುವರಿಸಲು ಅಸದ್‌ಖಾನನಿಗೆ ಹೇಳಿ ಇಸ್ಮಾಯಿಲ್‌ನು ಬಿಜಾಪುರಕ್ಕೆ ಹಿಂದಿರುಗಿದನು. ಅವನ ಕೊನೆ ದಿನಗಳು ಸಮೀಪಿಸಿದ್ದವು. ದಾರಿಯಲ್ಲಿ ೧೫೩೪ ಆಗಸ್ಟ್ ೨೭ರಂದು ಸಾಗರದಲ್ಲಿ ಮರಣ ಹೊಂದಿದನು.

ಇಸ್ಮಾಯಿಲ್‌ನ ಆಳ್ವಿಕೆ ಯುದ್ಧದ ಒಂದು ದೀರ್ಘ ಇತಿಹಾಸ ಮೊದಲಿನಿಂದ ಕೊನೆಯವರೆಗೂ ತುರುಸಿನ ಚಟುವಟಿಕೆಯಿಂದ ಕೂಡಿತ್ತು. ಇವನ ಆಳ್ವಿಕೆಯ ಅವಧಿಯಲ್ಲಿ ನಡೆದ ವಿಜಯನಗರದ ಜೊತೆಗೆ ದೋ ಅಬ್ ಪ್ರದೇಶಕ್ಕಾಗಿ ಮತ್ತು ಅಹಮದನಗರದ ಜೊತೆಗೆ ಶೋಲಾಪುರ ಪ್ರದೇಶಕ್ಕಾಗಿ ಯುದ್ಧಗಳು ಮುಂದಿನ ಸುಲ್ತಾನರಿಗೆ ಬುನಾದಿಯಾಗಿತ್ತು ಹಾಗೂ ಇವನ ಆಳ್ವಿಕೆಯ ಅವಧಿಯಲ್ಲಿ ಉತ್ತರ ಭಾರತದಲ್ಲಿ ಬಾಬರನು ಮೊಗಲ್ ಸಾಮ್ರಾಜ್ಯ ಸ್ಥಾಪನೆ ಮಾಡಿದನು.

**ಇಬ್ರಾಹಿಂ ಆದಿಲ್ ಷಹಾ (೧೫೩೫-೫೮)**

ಇಸ್ಮಾಯಿಲ್‌ಖಾನನ ಮರಣ ನಂತರ ಅವನ ಹಿರಿಯ ಮಗ ಮಲ್ಲುಖಾನ ಪಟ್ಟಕ್ಕೆ ಬಂದನಾದರೂ ಅಸಮರ್ಥತೆಯಿಂದಾಗಿ ಹೆಚ್ಚು ಕಾಲ ಅಧಿಕಾರದಲ್ಲಿ ಮುಂದುವರೆಯಲಿಲ್ಲ. ಅಸದ್‌ಖಾನನ ಸೂಚನೆಯಂತೆ ಮಲ್ಲುವಿನ ಕಣ್ಣು ಕೀಳಿಸಿ ಸೆರೆಮನೆಗೆ ತಳ್ಳಲಾಯಿತು. ಅಣ್ಣ ಮಲ್ಲುವಿನ ಸಿಂಹಾಸನಾರೋಹಣವನ್ನು ವಿರೋಧಿಸಿ ಇಬ್ರಾಹಿಂನನ್ನು ಮೀರಜ್‌ನಲ್ಲಿ ಬಂಧನದಲ್ಲಿಟ್ಟಿದ್ದ ಅಸದ್‌ಖಾನನು ಮಲ್ಲುವಿನ ನಂತರ ಒಂದನೇ ಇಬ್ರಾಹಿಂನನ್ನು ಪಟಕ್ಕೆ ತಂದು ತಾನೇ ಸುಲ್ತಾನನ ಪ್ರಧಾನ ಸಲಹೆಗಾರನಾದನು. ಪಟ್ಟಕ್ಕೆ ಬಂದಾಗ ಇಬ್ರಾಹಿಂನಿಗೆ ಕೇವಲ ೧೫ ವರ್ಷ. ಅಸದ್‌ಖಾನ್ ಐದು ವರ್ಷ ಅವನ ಆಳ್ವಿಕೆಯಲ್ಲಿ ಸೇವೆ ಸಲ್ಲಿಸಿದನು. ಅವನ ೧೩ ವರ್ಷಗಳ ಸುದೀರ್ಘ ಆಡಳಿತದಲ್ಲಿ ಇಬ್ರಾಹಿಂನು ಯೂಸುಫ್ ಮತ್ತು ಇಸ್ಮಾಯಿಲ್ ಮಾಡಿದ ಒಳ್ಳೆಯ ಕಾರ್ಯಗಳನ್ನು ಮುಂದುವರೆಸಿದನು. ರಾಜಕಾರಣದಲ್ಲಿ ದೋ ಅಬ್ ಪ್ರಶ್ನೆ, ಅಹಮದನಗರದ ವಿರುದ್ಧ ಯುದ್ಧ, ಬರೀದ್‌ರು ಮತ್ತು ಕುತುಬ್‌ಷಾಹಿಗಳ ವ್ಯವಹಾರ, ಪೋರ್ಚುಗೀಸರು ಮುಂದೆ ನುಗ್ಗದಂತೆ ತಡೆದದ್ದು ಇವು ಸೇರಿದ್ದವು. ಮೊದಲ ಇಬ್ಬರು ಸುಲ್ತಾನರಂತೆಯೇ ಇಬ್ರಾಹಿಂನೂ ರಾಜ್ಯದ ಐಕ್ಯತೆ ಮತ್ತು ಸಮಗ್ರತೆಗಳನ್ನು ಕಾಪಾಡಲು ಸದಾ ತುದಿಗಾಲ ಮೇಲೆ ನಿಂತಿದ್ದನು.

ಇಬ್ರಾಹಿಂನ ಮೊದಲನೆಯ ಸಮಸ್ಯೆ ವಿಜಯನಗರದಿಂದ ದೋ ಅಬ್ ಪ್ರದೇಶವನ್ನು ವಶಪಡಿಸಿಕೊಳ್ಳುವುದು. ವಿಜಯನಗರವು ೧೫೩೦ರಿಂದಲೂ ಕಷ್ಟದಲ್ಲಿ ಸಿಲುಕಿತ್ತು. ಅಧಿಕಾರಕ್ಕಾಗಿ ಎರಡು ಪಕ್ಷಗಳ ನಡುವೆ ತೀವ್ರವಾದ ಹೋರಾಟ ನಡೆಯುತ್ತಿತ್ತು. ಅದು ಅಚ್ಯುತನ ಭಾವ ತಿರುಮಲನಿಗೂ, ರಾಜಕುಟುಂಬದ ಇನ್ನೊಬ್ಬ ಸದಸ್ಯ ರಾಮರಾಯನ ನಡುವೆ ನಡೆಸುತ್ತಿದ್ದ ಸೆಣಸಾಟದಲ್ಲಿ ಬಿಜಾಪುರದ ನೆರವು ಪಡೆಯುವಲ್ಲಿ ತಿರುಮಲನು ಯಶಸ್ವಿಯಾದನು.[೨೫] ಇಬ್ರಾಹಿಂನು ಅಸದ್‌ಖಾನನೊಂದಿಗೆ ತಿರುಮಲನ ನೆರವಿಗೆ ಹೋದನು. ಅದು ಬಿಜಾಪುರಕ್ಕೆ ಬಹುಲಾಭಕರವಾದ ಯಾತ್ರೆಯಾಗಿತ್ತು.

ಸೈನ್ಯದ ವೆಚ್ಚವಾಗಿ ದಿನಭತ್ಯದ ಜೊತೆಗೆ ಆರು ಲಕ್ಷ ಹೊನ್ನುಗಳನ್ನು ತಿರುಮಲನು ಕೊಟ್ಟನು. ವಿಜಯನಗರದ ವ್ಯವಹಾರವು ಹೆಚ್ಚು ಗೊಂದಲಮಯವಾಗಿತ್ತು. ಅದು ಮಹಮೂದ್ ಗವಾನನ ಕೊಲೆಯ ನಂತರ ಬಹಮನಿ ರಾಜ್ಯದಲ್ಲಿ ಏನಾಯಿತೋ ಹಾಗೆಯೇ ಹೆಚ್ಚು ಕಡಿಮೆ ವಿಜಯನಗರದಲ್ಲಿ ನಡೆಯುತ್ತಿತ್ತು. ಅಚ್ಯುತರಾಯನ ಆಡಳಿತವು ಸುಖಭೋಗಗಳ ಜೀವನದಲ್ಲಿ ಮುಳುಗಿತು. ಕೊನೆಗೆ ೧೫೪೨ರಲ್ಲಿ ಅವನ ಮರಣದ ನಂತರ ತಿರುಮಲನು ಸಕಲ ಅಧಿಕಾರದ ಸೂತ್ರಗಳನ್ನು ಹಿಡಿದನು. ತಿರುಮಲನು ಅಧಿಕಾರದ ಆಸೆಯಿಂದ ಅಚ್ಯುತರಾಯನ

ಮಗ ೧ನೆಯ ವೆಂಕಟನನ್ನು ಕೊಲೆಗೈದ ಮೇಲೆ ತಾನು ಸಿಂಹಾಸವನ್ನು ಅಲಂಕರಿಸಿದನು. ಈ ಹಂತದಲ್ಲಿ ರಾಜಮಾತೆ 'ವರದಾದೇವಿಯು' ಇಬ್ರಾಹಿಂನ ನೆರವನ್ನು ಕೋರಿದಳು. ದುರಾಡಳಿತಗಾರ ತಿರುಮಲನನ್ನು ಅಧಿಕಾರದಿಂದಿಳಿಸಲು, ಇಬ್ರಾಹಿಂನನ್ನು ಆಹ್ವಾನಿಸಲು ನೋಬಲ್ಸ್‌ರೂ ಒಪ್ಪಿದರು. ಆದರೆ ತಿರುಮಲನು ವೇಗವಾಗಿ ಕೆಲಸ ಮಾಡಿ ಇಬ್ರಾಹಿಂನಿಗೆ ಬೇಕಾದಷ್ಟು ಉಡುಗೊರೆಗಳನ್ನು ಕಳಿಸಿ ತನಗೆ ಆದಿಲ್‌ಷಾಹಿಗಳ ಬೆಂಬಲವನ್ನು ಕೋರಿದನು. ಇಬ್ರಾಹಿಂ ಅಸದ್‌ಖಾನನೊಂದಿಗೆ ವಿಜಯನಗರಕ್ಕೆ ಹೋದನು. ಆದಿಲ್‌ಷಾಹಿಗಳ ಆಗಮನದಿಂದ ತಿರುಮಲನ ವಿರೋಧಿಗಳು ಹೆದರಿದರು. ಈ ವೇಳೆಗೆ ಅಳಿಯ ರಾಮರಾಯನು ತಿರುಮಲನಿಗೆ ಶರಣಾಗಿದ್ದನು. ಆದ್ದರಿಂದ ಯುದ್ಧ ಮಾಡಬೇಕಾದ ಸಂದರ್ಭವೇ ಬರಲಿಲ್ಲ.[೨೫] ತಿರುಮಲನು ಬಿಕ್ಕಟ್ಟು ತೀರಿತೆಂದು ಅವನು ಸೇನಾ ನೆರವು ಕೇಳಿದ್ದರ ಸಲುವಾಗಿ ನಷ್ಟಭರ್ತಿ ಹಣವನ್ನು ಕೊಟ್ಟು ಇಬ್ರಾಹಿಂನನ್ನು ಹಿಂದಕ್ಕೆ ಹೋಗಲು ಹೇಳಿದನು. ಇಬ್ರಾಹಿಂ ಹಿಂದಿರುಗಿದೊಡನೆ ಅಳಿಯ ರಾಮರಾಯನು ವಿಜಯನಗರದಲ್ಲಿ ದಂಗೆ ಎದ್ದು ಎಲ್ಲ ಅಧಿಕಾರವನ್ನು ವಶಪಡಿಸಿಕೊಂಡನು.

ಈ ಮಧ್ಯೆ ಬಿಜಾಪುರದಲ್ಲಿ ಇನ್ನೂ ಕೆಲವು ಮಹತ್ವದ ಘಟನೆಗಳು ನಡೆದಿದ್ದವು ಕೊನೆಯ ಬಹಮನಿ ಸುಲ್ತಾನ ಕಲೀಮುಲ್ಲಾ ಮರಣ ಹೊಂದಿದ್ದನು. ಅದುವರೆಗೆ ಆದಿಲ್‌ಷಾಹಿಗಳು ಬೀದರೆಯ ರಾಜನನ್ನು ಸುಲ್ತಾನನೆಂದು ಪರಿಗಣಿಸಿ ತಾವು 'ಷಹಾ' ಎಂದು ಕರೆದುಕೊಂಡಿರಲಿಲ್ಲ. ಈಗ ಅವರು ಆ ಬಿರುದನ್ನು ಧರಿಸಿದರು. ಇಬ್ರಾಹಿಂ ಆದಿಲ್‌ಖಾನನು, ಇಬ್ರಾಹಿಂ ಆದಿಲ್‌ಷಹಾ ಆದನು. ಯೂಸುಫ್ ಆಗಲಿ ಇಸ್ಮಾಯಿಲ್ ಆಗಲಿ ಸಾಧಿಸಲಾಗದ್ದನ್ನು ಇಬ್ರಾಹಿಂ ಸಾಧಿಸಿದನು.[೨೬] ಇಬ್ರಾಹಿಂನು ಶಿಯಾ ಪಂತವನ್ನು ತೊರೆದು ಮತ್ತೆ ಸುನ್ನಿ ಪಂಥಕ್ಕೆ ೧೫೩೪ರಲ್ಲಿ ಪರಿವರ್ತಿತನಾದನು. ದಖನಿಗಳ ಬಗೆಗೆ ಹೆಚ್ಚಿನ ಪಕ್ಷಪಾತ ತೋರಿಸಿದನು ಮತ್ತು ಅನೇಕ ಅಫಕಿಗಳನ್ನು ಸೇವೆಯಿಂದ ವಜಾ ಮಾಡಿದನು. ಆದರೆ ಅತ್ಯಂತ ಪ್ರಬಲರಾಗಿದ್ದ ಅಸದ್‌ಖಾನನಂತಹ ಕೆಲವರನ್ನು ಉಳಿಸಬೇಕಾಯಿತು. ಹೀಗೆ ಅಫಕಿ ನೋಬಲ್ಸ್‌ರನ್ನು ವಜಾ ಮಾಡಿದ್ದು ದೂರಸ್ಪರ್ಶಿಯಾದ ಪರಿಣಾಮಗಳನ್ನುಂಟು ಮಾಡಿದವು. ಅವರಲ್ಲಿ ಅನೇಕರು ನೆರೆಯ ಷಾಹಿ ರಾಜ್ಯಗಳಲ್ಲೂ, ವಿಜಯನಗರದಲ್ಲೂ ನೌಕರಿಗೆ ಸೇರಿದರು. ಈ ಬದಲಾವಣೆಗಳು ಅಸದ್‌ಖಾನನಿಗೆ ಹಿಡಿಸಲಿಲ್ಲ. ಅದರಲ್ಲೂ ವಿಶೇಷವಾಗಿ ಅವನು ಸುನ್ನಿ ಪಂಥಕ್ಕೆ ಮರಳಿದ್ದು ಅವನಿಗೆ ಬೇಸರವಾಯಿತು. ಇದರಿಂದ ಆಸ್ಥಾನದಲ್ಲಿ ಅಸದ್‌ಖಾನ್ ವಿರೋಧಿಗಳಾಗಿದ್ದವರಿಗೆ ಸುಲ್ತಾನನ ಕಿವಿಯಲ್ಲಿ ವಿಷ ತುಂಬಲು ಅವಕಾಶವಾಯಿತು. ಈಗ ತಾನು ನಿವೃತ್ತನಾಗುವುದು ವಿವೇಕ ಎಂದು ನಿರ್ಧರಿಸಿ ಅಸದ್‌ಖಾನ ೧೫೪೨ರಲ್ಲಿ ಸೇವೆಯಿಂದ ನಿವೃತ್ತನಾಗಿ ತನ್ನ ಬೆಳಗಾವಿ ಜಾಗೀರಿಗೆ ಮರಳಿದನು.[೨೭]

ಬಿಜಾಪುರವು ಅಹಮದನಗರದೊಂದಿಗೆ ಯುದ್ಧ ಮಾಡಬೇಕಾಯಿತು. ಶೋಲಾಪುರ ಪ್ರದೇಶದ ವಿಷಯವಾಗಿ ಇಬ್ಬರಿಗೂ ವೈಮನಸ್ಸಿತ್ತು. ಬರ್ಹಾನನು ಶಿಯಾ ಪಂಥಕ್ಕೆ ಪರಿವರ್ತನೆ ಹೊಂದಿದ್ದರಿಂದ ಅದು ಇನ್ನಷ್ಟು ತೊಡಕಾಯಿತು. ಕಾರಣ ಇಬ್ರಾಹಿಂನು ಶಿಯಾ ಪಂಥದಿಂದ ಸುನ್ನಿ ಪಂಥಕ್ಕೆ ಪರಿವರ್ತನೆ ಹೊಂದಿದ್ದನು. ಇದರ ಜೊತೆಗೆ ಅಹಮದನಗರದ ಪ್ರದೇಶವನ್ನು ಬಿಜಾಪುರ, ಗುಜರಾತ್ ಮತ್ತು ಖಾನದೇಶಗಳ ನಡುವೆ ಹಂಚಿಕೊಳ್ಳಬೇಕೆಂದು ಇಬ್ರಾಹಿಂನ ಯೋಜನೆಯಾಗಿತ್ತು. ಈ ಯೋಜನೆಯು ಪರಿಸ್ಥಿತಿಯನ್ನು ಇನ್ನಷ್ಟು

ಬಿಗಡಾಯಿಸುವಂತೆ ಮಾಡಿತು. ಬರ್ಹಾನನು ಕಷ್ಟಪಟ್ಟು ಗುಜರಾತ್ ಮತ್ತು ಖಾನ ದೇಶಗಳನ್ನು ಹಂಚಿಕೆಯಲ್ಲಿ ಪಾಲುಗೊಳ್ಳದಿರಲು ಒಪ್ಪಿಸಿದನು. ಅವರನ್ನು ಬಿಜಾಪುರದಿಂದ ಬೇರ್ಪಡಿಸಿ ಆಮೇಲೆ, ಅಸದ್‌ಖಾನನೂ ತನ್ನ ಜಾಗೀರಿಗೆ ಮರಳಿದ್ದಾನೆ ಎಂಬುದು ತಿಳಿದ ಮೇಲೆ ಬಿಜಾಪುರದ ಮೇಲೆ ಯುದ್ಧಕ್ಕೆ ಹೊರಟನು. ೧೫೪೨ರಲ್ಲಿ ಬರೀದನೊಂದಿಗೆ ಸೇರಿಕೊಂಡು ಶೋಲಾಪುರದ ಮೇಲೆ ದಾಳಿ ಮಾಡಿ ಆ ಸ್ಥಳವನ್ನು ವಶಪಡಿಸಿಕೊಂಡು ಬೆಳಗಾಂ ಕಡೆಗೆ ಹೋಗಲು ಯೋಜಿಸಿದನು. ಅಷ್ಟರಲ್ಲಿ ನಿವೃತ್ತನಾಗಿದ್ದರೂ ಅಸದ್‌ಖಾನನು ೬೦೦೦ ಸೈನ್ಯದೊಂದಿಗೆ ಇಬ್ರಾಹಿಂನ ನೆರವಿಗೆ ಬಂದನು. ಇಬ್ರಾಹಿಂನು ಅಸದ್‌ಖಾನನೂ ವೈರಿಗಳ ಪಕ್ಷವನ್ನೇ ಸೇರಿಬಿಟ್ಟನೆಂದು ತಪ್ಪಾಗಿ ಗ್ರಹಿಸಿ, ವೈರಿಯನ್ನು ಎದುರಿಸದೆ ಗುಲಬರ್ಗಾಕ್ಕೆ ಓಡಿಹೋದನು. ಈ ತಪ್ಪು ಕಲ್ಪನೆಯಿಂದಾಗಿ ಬಿಜಾಪುರಕ್ಕೆ ಬಹಳ ಸೂಕ್ಷ್ಮವಾದ ಸ್ಥಿತಿಯುಂಟಾಯಿತು. ಅಸದ್‌ಖಾನನ ನಿಷ್ಠೆ ಎಷ್ಟಿತ್ತೆಂದರೆ, ಏನೇ ಆಗಲಿ ಇಬ್ರಾಹಿಂನನ್ನು ಕಷ್ಟ ಪರಿಸ್ಥಿತಿಯಿಂದ ಪಾರು ಮಾಡಲು ಅವನು ಬಯಸಿದನು. ಆದ್ದರಿಂದ ಬರ್ಹಾನನಿಗೆ ಶರಣಾದಂತೆ ನಟಿಸಿ, ಗುಲಬರ್ಗಾದ ಕಡೆಗೆ ನಡೆದನು.

ಅದೇ ಸಮಯದಲ್ಲಿ ಎಲಿಚಪುರದಲ್ಲಿ ದರ್ಯಾ ಇಮದುಲ್‌ಶಹಾನನ್ನು ಸಂಪರ್ಕಿಸಿ, ನಡೆದಿರುವ ವಿಷಯವನ್ನು ಅವನಿಗೆ ವಿವರಿಸಿ, ಇಬ್ರಾಹಿಂನನ್ನು ಬಿಡುಗಡೆ ಮಾಡಲು ಅವನ ನೆರವು ಕೋರಿದನು. ಇಮಾದುಲ್ ಮುಲ್ಕ್ ಗುಲಬರ್ಗಾಕ್ಕೆ ಬಂದನು. ಬೀರಾರ್ ಎಂದಿನಿಂದಲೂ ಬಿಜಾಪುರದ ಮಿತ್ರ ಅಸದ್‌ಖಾನನು ದಿಢೀರನೆ ಇಮಾದುಲ್ ಮುಲ್ಕ್‌ನೊಂದಿಗೆ ಕೂಡಿಕೊಂಡು ಪ್ರತ್ಯಕ್ಷನಾದುದನ್ನು ನೋಡಿ ಬರ್ಹಾನನಿಗೆ ಆಶ್ಚರ್ಯವಾಯಿತು. ಅಸದ್‌ಖಾನನ ಹಂಚಿಕೆ ಫಲ ಕೊಟ್ಟಿತು ಇಬ್ರಾಹಿಂನಿಗೆ ತನ್ನ ಮಾಜಿ ಪ್ರಧಾನಿಯ ನಿಷ್ಠೆ ಮನವರಿಕೆಯಾಯಿತು. ಇಮಾದುಲ್, ಅಸದ್‌ಖಾನ್ ಮತ್ತು ಇಬ್ರಾಹಿಂರನ್ನು ಒಟ್ಟಿಗೆ ಎದುರಿಸಲು ಹೋಗುವುದು ಅವಿವೇಕ ಎಂದು ಭಾವಿಸಿ ಬರ್ಹಾನನು ಅಹಮದನಗರಕ್ಕೆ ಹಿಂದಿರುಗಿದನು. ಬಿಜಾಪುರದ ಮೇಲಿನ ದೊಡ್ಡ ಆಪತ್ತು ಪರಿಹಾರವಾಯಿತು. ಆದರೆ ಬರ್ಹಾನನು ಇಬ್ರಾಹಿಂನೊಂದಿಗೆ ಮಾತುಕತೆಗಳಲ್ಲಿ ತೊಡಗಿದನು. ಅಲ್ಲಿ ಅಸದ್‌ಖಾನ್ ಮತ್ತು ಇಮಾದುಲ್‌ಮುಲ್ಕ್ ಇಬ್ಬರೂ ಈ ಬೇಡಿಕೆಯನ್ನು ನಿರಾಕರಿಸಬಾರದೆಂದು ಇಬ್ರಾಹಿಂನನ್ನು ಒತ್ತಾಯಿಸಿದರು.

ಶೋಲಾಪುರವನ್ನು ಬಿಜಾಪುರಕ್ಕೆ ಒಪ್ಪಿಸಿಕೊಡಲು ಬರ್ಹಾನ್ ಒಪ್ಪಿದನು. ಮತ್ತೆ ಎಂದಿಗೂ ತಾನು ಶತ್ರುವಾಗುವುದಿಲ್ಲವೆಂದೂ ಮಾತು ಕೊಟ್ಟನು.[೨೯] ಆದರೆ ಬೇಗನೆಯೇ ಅದನ್ನು ಅವನು ಮುರಿದದ್ದೂ ಆಯಿತು. ೧೫೪೩ರಲ್ಲಿ ಬಿಜಾಪುರದ ವಿರುದ್ಧವಾಗಿ ಇನ್ನೊಂದು ಒಕ್ಕೂಟದ ರಚನೆಯಾಯಿತು. ಸೋಲಾಪುರವನ್ನು ಹಿಂದಕ್ಕೆ ಕಿತ್ತುಕೊಳ್ಳುವುದು ಬರ್ಹಾನನ ಉದ್ದೇಶವಾಗಿತು. ಕುಟಿಲ ಹಂಚಿಕೆಗಳೊಂದಿಗೆ ಶಹಾತಾಹಿರ್‌ನನ್ನು ಗೋಲ್ಕೊಂಡ ಮತ್ತು ವಿಜಯನಗರಗಳ ಒಂದು ಒಕ್ಕೂಟ ರಚನೆಗೆ ಪ್ರೇರೇಪಿಸಲಾಯಿತು. ಇಂತಹ ಕಾರ್ಯಕ್ಕೆ ಅಳಿಯ ರಾಮರಾಯನು ಸಿದ್ಧವಾಗೇ ಇದ್ದನು. ವಾಸ್ತವವಾಗಿ, ಅರಮನೆಯ ವ್ಯವಹಾರಗಳಲ್ಲಿ ಮೂಗುತೂರಿಸಿದ್ದಕ್ಕಾಗಿ ಇಬ್ರಾಹಿಂನನ್ನು ಶಿಕ್ಷಿಸಲು ಅವನು ಒಂದು ಅವಕಾಶಕ್ಕಾಗಿ ಕಾಯುತ್ತಿದ್ದನು. ವಿಜಯನಗರವು ದಕ್ಷಿಣದಿಂದಲೂ, ಗೋಲ್ಕೊಂಡವು ಪೂರ್ವದಿಂದಲೂ, ಬರ್ಹಾನ್ ಮತ್ತು ಅಲಿಬರೀದರು ಈಶಾನ್ಯದಿಂದಲೂ ಬಿಜಾಪುರದ ಮೇಲೆ ಆಕ್ರಮಣ ಮಾಡಬೇಕೆಂದು ನಿರ್ಧಾರವಾಯಿತು. ಹೀಗೆ ವೈರಿ ಒಕ್ಕೂಟವು ಮೂರು ದಿಕ್ಕಿನಿಂದ ಬಿಜಾಪುರದ

ಮೇಲೆ ದಾಳಿ ಮಾಡಿದರು. ಇದು ಇಬ್ರಾಹಿಂನಿಗೆ ಬಹು ಗಂಭೀರವಾದ ಪರಿಸ್ಥಿತಿ ಬಂದೊದಗಿತು. ಇಬ್ರಾಹಿಂನಿಗೆ ಉಳಿದಿದ್ದ ಆಸೆ ಆಸದ್‌ಖಾನ್ ಒಬ್ಬನೇ ಅವನ ಸಲಹೆಯನ್ನು ಕೇಳಿದನು. ಮೂವರು ವೈರಿಗಳಲ್ಲಿ ಅತಿ ಕಡಿಮೆ ಬಲಶಾಲಿಯಾದವರನ್ನು ಪ್ರತ್ಯಕ್ಷಗೊಳಿಸಬೇಕೆಂದು ಅವನು ಸಲಹೆ ನೀಡಿದನು. ಅದರ ಪ್ರಕಾರ ಬರ್ಹಾನನಿಗೆ ಶೋಲಾಪುರವನ್ನು ಮತ್ತು ವಿಜಯನಗರದ ಅಳಿಯ ರಾಮರಾಯನಿಗೆ ಸ್ನೇಹದ ಕುರುಹಾಗಿ ಉಡುಗೊರೆಗಳನ್ನು ಕಳಿಸಿ ಎರಡು ರಾಜ್ಯಗಳೊಂದಿಗೆ ಸಂಧಿ ಮಾಡಿಕೊಂಡು ಇವುಗಳ ಜೊತೆಗೆ ಇರುವ ಗೋಲ್ಕೊಂಡ ರಾಜ್ಯವನ್ನು ಏಕಾಂಗಿಯಾಗಿ ಮಾಡಿ ಅಸದ್‌ಖಾನನು ಸೇನಾ ಸಮೇತ ಹೊರಟ ಜಂಷೀದನನ್ನು ಸಂಪೂರ್ಣವಾಗಿ ಸೋಲಿಸಿ, ಅವನನ್ನು ಗೋಲ್ಕೊಂಡದ ಬಾಗಿಲವರೆಗೂ ಅಟ್ಟಿದನು. ಜಂಷೀದನಿಗೆ ಮುಖದಲ್ಲಿ ಗಾಯವೂ ಆಯಿತು. ಅಸದ್‌ಖಾನ ವಿಜಯೋತ್ಸಾಹದಿಂದ ಬಿಜಾಪುರಕ್ಕೆ ಹಿಂದಿರುಗಿದನು. ಹೀಗೆ ಆದಿಲ್‌ಷಾಹಿ ರಾಜ್ಯದ ವಿರುದ್ಧ ವೈರಿ ಒಕ್ಕೂಟದ.ಮೊದಲ ಯುದ್ಧವು ಮುಕ್ತಾಯವಾಯಿತು.[೩೦]

ಇಬ್ರಾಹಿಂನ ಕಷ್ಟಗಳು ಅಲ್ಲಿಗೆ ಮುಗಿಯಲಿಲ್ಲ. ಬಹುಮಟ್ಟಿಗೆ ಅವನದೇ ಕೆಲವು ತಪ್ಪು ಕೆಲಸದಿಂದಾಗಿ ಹೊಸ ಕಷ್ಟಗಳು ಪ್ರಾಪ್ತವಾದವು. ಅವನ ಸಹೋದರ ಅಬ್ದುಲ್ಲಾ ದಂಗೆಯೆದ್ದನು ಹಾಗೂ ಇಬ್ರಾಹಿಂನು ಅನಗತ್ಯ ಕ್ರೌರ್ಯದಿಂದ ಅನೇಕ ಅಧಿಕಾರಿಗಳ ಮೇಲೆ ಸಂದೇಹಪಡಲು ಪ್ರಾರಂಭಿಸಿದನು. ಕಾರಣವೆಂದರೆ ಬರ್ಹಾನನ ಕೈಯಲ್ಲಿ ಅನುಭವಿಸಿದ ಈಚಿನ ಸೋಲುಗಳು ತನ್ನ ದಂಡನಾಯಕರನ್ನೇ ಅವನು ಸಂದೇಹಿಸುವಂತೆ ಮಾಡಿದವು. ಭೀಕರತೆಯ ದಬ್ಬಾಳಿಕೆ ತಾಂಡವಾಡಿತು. ಅನೇಕ ಮುಗ್ಧಜೀವಗಳು ಬಲಿಯಾದವು. ಪಿತೂರಿ, ಒಳಸಂಚುಗಳು ದಿನನಿತ್ಯದ ವ್ಯವಹಾರವಾದವು. ಹತಾಶರಾದ ನೋಬಲ್ಸ್‌ರು ಬದಲಾವಣೆಗೆ ಯೋಚಿಸತೊಡಗಿದರು. ಅವನ ತಮ್ಮ ಅಬ್ದುಲ್ಲಾ ದಂಗೆ ಏಳುವಂತೆ ಮಾಡಿದರು ಆದರೆ ಸಂಚು ಬಯಲಾಗಿ ಹೆಚ್ಚು ತಲೆಗಳು ಉರುಳಿದವು. ಆದ್ದರಿಂದ ಅಬ್ದುಲ್ಲಾ ಗೋವಾಕ್ಕೆ ಓಡಿಹೋದನು. ಪೋರ್ಚುಗೀಸರು ಅವನನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳಲು ಬಯಸಿದರು. ಶಾಂತವಾಗಿದ್ದ ಬಿಜಾಪುರದ ಆಸ್ಥಾನವು ಒಳ ಸಂಚುಗಳ ಆಗರವಾಯಿತು. ಅನೇಕ ನೋಬಲ್ಸ್‌ರು ರಾಜಧಾನಿಯನ್ನು ತೊರೆದು ಹೋದರು. ಗೋವಾದಲ್ಲಿ ಅಬ್ದುಲ್ಲಾ ಬಿಜಾಪುರದ ವಿರುದ್ಧ ಆಳವಾದ ಒಳಸಂಚಿನ ಕೇಂದ್ರವಾದನು. ಅಬ್ದುಲ್ಲಾ ಗೋವಾದಿಂದ ನೀಡಿದ ಕರೆಗೆ ಬರ್ಹಾನ್ ಓಗೊಟ್ಟು ಅವನಿಗೆ ನೆರವು ನೀಡುವುದಾಗಿ ಭರವಸೆಯಿತ್ತನು. ಗೋಲ್ಕೊಂಡದ ಜಂಷೀದನೂ ಸಿದ್ಧವಾಗಿದ್ದನು. ಅಸದ್‌ಖಾನನನ್ನೂ ತನ್ನ ಪಕ್ಷಕ್ಕೆ ಸೆಳೆದುಕೊಳ್ಳಲು ಬರ್ಹಾನ್ ಪ್ರಯತ್ನಿಸಿದನು. ಆದರೆ ನಿಷ್ಠನಾದ ಮಂತ್ರಿಯು ತನ್ನ ಒಡೆಯನಿಗೆ ದ್ರೋಹ ಬಗೆಯಲು ಸಿದ್ಧನಾಗಿರಲಿಲ್ಲ. ಇಬ್ರಾಹಿಂನ ಅದೃಷ್ಟವೆಂಬಂತೆ ಷಹಾ ತಾಹಿರ್ ಮೃತನಾದನು. ಆದ್ದರಿಂದ ಬರ್ಹಾನ ಮತ್ತು ಅಬ್ದುಲ್ಲಾನನೂ ಯುದ್ಧದ ವಿಚಾರವನ್ನು ಅರ್ಧಕ್ಕೇ ಕೈಬಿಟ್ಟು ರಾಜಧಾನಿಗೆ ಹಿಂದಿರುಗಿದರು. ಪೋರ್ಚುಗೀಸರೊಂದಿಗೆ ಇಬ್ರಾಹಿಂನೇ ವ್ಯವಹರಿಸಬೇಕಾಯಿತು. ಪೋರ್ಚುಗೀಸ್ ವೈಸರಾಯ್ ಅಲ್ಫಾನ್ಸೋ ಡಿಸೋಜನೊಂದಿಗೆ ಇಬ್ರಾಹಿಂ ಮಾತುಕತೆಗಳನ್ನು ಪ್ರಾರಂಭಿಸಿದನು. ಗೋವಾದಲ್ಲಿ ಆಶ್ರಯ ಪಡೆದಿದ್ದ ಅಬ್ದುಲ್ಲಾನನ್ನು ಒಪ್ಪಿಸಬೇಕೆಂದು ಕೇಳಿದನು. ಅದಕ್ಕೆ ಪ್ರತಿಯಾಗಿ ಅವರಿಗೆ ಸಾಲ್ಸೆಟ್ ಮತ್ತು ಬಾರ್ಡೆಜ್ ಪ್ರದೇಶಗಳನ್ನು ಕೊಡುವುದಾಗಿ ಹೇಳಿದನು. ಆ ಎರಡು ಪ್ರದೇಶಗಳನ್ನು ಕೊಟ್ಟರೆ, ಅಬ್ದುಲ್ಲಾನನ್ನು ಮಲಕ್ಕಾ

ಪ್ರದೇಶಕ್ಕೆ ಕಳುಹಿಸಿಬಿಟ್ಟರೆ ಅವನು ಬಿಜಾಪುರಕ್ಕೆ ಯಾವ ಹಾನಿಯನ್ನೂ ಮಾಡಲಾರನೆಂದೂ ಅಲ್ಫಾನ್ಸೋ ಹೇಳಿದನು. ಬಾರ್ಡೆಜ್ ಮತ್ತು ಸಾಲ್ಸೆಟ್‌ಗಳನ್ನು ಪೋರ್ಚುಗೀಸರು ವಶಪಡಿಸಿಕೊಂಡರು. ಆದರೆ ಪೋರ್ಚುಗೀಸರು ಅಬ್ದುಲ್ಲಾನನ್ನು ಮಲಕ್ಕಾಗೆ ಕಳಿಸದೇ ಕಣ್ಣಾನೂರಿಗೆ ರವಾನಿಸಿದರು. ಅಗತ್ಯವಾದಾಗಲೆಲ್ಲ ಇಬ್ರಾಹಿಂನಿಂದ ಹೆಚ್ಚು ಸವಲತ್ತುಗಳನ್ನು ಪಡೆಯಲು ಅವರು ಅಬ್ದುಲ್ಲಾನನ್ನು ತಮ್ಮ ವಶದಲ್ಲೇ ಇಟ್ಟುಕೊಳ್ಳಲು ನಿರ್ಧರಿಸಿದ್ದರು. ಅದೇ ಸಮಯದಲ್ಲಿ ಮಧ್ಯ ಗೋವಾದಲ್ಲಿ ಗವರ್ನರ್ ಬದಲಾದನು. ೧೫೪೫ ಸೆಪ್ಟೆಂಬರಿನಲ್ಲಿ ಅಲ್ಫಾನ್ಸೋನ ಸ್ಥಳಕ್ಕೆ 'ಹೋಮ್ ಜೋವೋ ಡಿ ಕ್ಯಾಸ್ಟ್ರೋ' ಬಂದನು. ಇಬ್ರಾಹಿಂ ಅವನೊಂದಿಗೆ ಹೊಸದಾಗಿ ಮಾತುಕತೆಗೆ ಆರಂಭಿಸಿದನು. ಆದರೆ ಕ್ಯಾಸ್ಟ್ರೋ ತೋರಿದ ಒಂದೇ ಒಂದು ರಿಯಾಯತಿಯೆಂದರೆ ಅಲ್ಲಿಂದ ಮುಂದಕ್ಕೆ ಅಬ್ದುಲ್ಲಾನು ಬರ್ಹಾನನೊಂದಿಗಾಗಲಿ, ಬೇರೆ ಸುಲ್ತಾನನೊಂದಿಗಾಗಲಿ ಸಂಪರ್ಕ ಬೆಳೆಸದಂತೆ ನೋಡಿಕೊಳ್ಳುವುದಾಗಿ ಹೇಳಿದನು.[೪೧] ಮೊದಲು ಇಬ್ರಾಹಿಂನು ಅಷ್ಟಕ್ಕೆ ಒಪ್ಪಿಕೊಂಡು ಬಾರ್ಡೆಜ್ ಮತ್ತು ಸಾಲ್ಸೆಟ್‌ಗಳನ್ನು ಕೊಟ್ಟನು. ಆದರೆ ಪೋರ್ಚುಗೀಸರು ಗುಜರಾತ್ ಕರಾವಳಿಯ ವ್ಯವಹಾರದಲ್ಲಿ ಮಗ್ನರಾಗಿದ್ದಾಗ ಅವನು ಸೇನೆಯೊಂದಿಗೆ ಹೋಗಿ ಎರಡು ಪ್ರದೇಶಗಳನ್ನೂ ಆಕ್ರಮಿಸಿಕೊಂಡನು. ಪೋರ್ಚುಗೀಸರು ಇದಕ್ಕೆ ಮುಯ್ಯಿ ತೀರಿಸಿಕೊಳ್ಳಲು ದಾಭೋಲ್ ನಗರದ ಮೇಲೆ ದಾಳಿ ಮಾಡಿ ಲೂಟಿ ಹೊಡೆದರು. ಹಾಗೆಯೇ ಬಾರ್ಡೆಜ್ ಮತ್ತು ಸಾಲ್ಸೆಟ್‌ಗಳಿಂದ ಬಿಜಾಪುರದ ಸೈನ್ಯವನ್ನು ಹೊಡೆದಟ್ಟಿದರು. ಕ್ಯಾಸ್ಟ್ರೋ ಅಹಮದನಗರ ಮತ್ತು ವಿಜಯನಗರದೊಂದಿಗೆ ೧೫೪೬ ಮತ್ತು ೧೫೪೭ರಲ್ಲಿ ಒಪ್ಪಂದ ಮಾಡಿಕೊಂಡಿದ್ದಾನೆಂದು ತಿಳಿದಾಗ ಬೇರೆ ದಾರಿಯಿಲ್ಲದೆ ಇಬ್ರಾಹಿಂ ಅವರೊಂದಿಗೆ ಸಂಧಿಯನ್ನು ಕೋರಿ ೧೫೪೮ರಲ್ಲಿ ಬಾರ್ಡೆಜ್ ಮತ್ತು ಸಾಲ್ಸೆಟ್ ಪ್ರದೇಶಗಳನ್ನು ಅವನು ಪೋರ್ಚುಗೀಸರಿಗೆ ಒಪ್ಪಿಸಬೇಕಾಯಿತು.

ಇಬ್ರಾಹಿಂನ ಆಳ್ವಿಕೆಯಲ್ಲಿ ಬಹಮನಿ ರಾಜ್ಯದ ಲಕ್ಷಣ ಹೆಚ್ಚೇನೂ ಬದಲಾಗಲಿಲ್ಲ. ತನ್ನ ತಂದೆ ಮತ್ತು ತಾತಂದಿರು ಹಾಕಿದ ಸಂಪ್ರದಾಯಗಳನ್ನು ಅವನು ಮುಂದುವರಿಸಿಕೊಂಡು ಬಂದನು. ಯುದ್ಧಗಳು, ಒಳಸಂಚು, ಪಿತೂರಿ, ದಂಗೆ, ಬಂಡಾಯಗಳು ಎಂದಿನಂತೆಯೇ ಇದ್ದವು. ಅವನು ಒಂದಾದ ಮೇಲೊಂದರಂತೆ ಗೆಲುವನ್ನೂ ಅನುಭವಿಸಿದನು. ಅಂತೆಯೇ ಸಾಲುಸಾಲಾಗಿ ಸೋಲನ್ನೂ ಅನುಭವಿಸಿದನು. ಇಬ್ರಾಹಿಂನ ನೆರೆಯವರಾದ ಅಹಮದನಗರ, ಬೀದರ್, ಬೀರಾರ್, ಗೋಲ್ಕೊಂಡ ಮತ್ತು ವಿಜಯನಗರದೊಂದಿಗೆ ನಿರಂತರ ಯುದ್ಧಕ್ಕೆ ಹೋಗಬೇಕಾಯಿತು. ಅವರು ಯಾವಾಗ ಯಾವ ಪಕ್ಷದ ಕಡೆಗೆ ಒಲವು ತೋರಿಸುತ್ತಾರೆ ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವೇ ಇರಲಿಲ್ಲ. ಇಬ್ರಾಹಿಂನು ಅತಿಯಾದ ಯುದ್ಧಗಳಲ್ಲಿ ತೊಡಗಿದ್ದರಿಂದ ಅನಾರೋಗ್ಯದಿಂದ ಬಳಲುತ್ತ ೧೫೫೦ರಲ್ಲಿ ಮರಣ ಹೊಂದಿದನು.

**ಒಂದನೆಯ ಅಲಿ ಆದಿಲ್‌ಷಾಹ (೧೫೫೦-೮೦)**

ಇಬ್ರಾಹಿಂ ಆದಿಲ್ ಷಾಹಾನ ಮರಣದ ನಂತರ ಅವನ ಹಿರಿಯ ಮಗನಾದ ಒಂದನೇ ಅಲಿ ಆದಿಲ್ ಷಾಹಾ ೧೫೫೦ರಲ್ಲಿ ಅಧಿಕಾರಕ್ಕೆ ಬಂದನು. ಅವನಿಗೆ ಷಿಯಾ ಪಂಥದ ಪರವಾದ ಒಲವಿತ್ತು. ಅವನ ಆಳ್ವಿಕೆಯಲ್ಲಿ ಮತ್ತೆ ಅಫಕಿಗಳು ಮೇಲುಗೈ ಸಾಧಿಸಿದರು. ಒಂದನೇ ಅಲಿಯು ಅಹಮದನಗರದ ವಂಶದಲ್ಲಿರುವ ಶೋಲಾಪುರ

ಮತ್ತು ಕಲ್ಯಾಣದ ಪ್ರದೇಶಗಳನ್ನು ಪಡೆಯುವುದಕ್ಕಾಗಿ ವಿಜಯನಗರದೊಂದಿಗೆ ಮೈತ್ರಿ ಬೆಳೆಸಲು ಪ್ರಯತ್ನಿಸಿದನು. ಅದಕ್ಕಾಗಿ ಇವನು ವಿಜಯನಗರಕ್ಕೆ ಕಿಶ್ವರಖಾನ ಲಹರಿಯನ್ನು ತನ್ನ ರಾಯಭಾರಿಯನ್ನಾಗಿ ಕಳುಹಿಸಿದನು. ಆದರೆ ಅಳಿಯ ರಾಮರಾಯನು ಸ್ವತಃ ಸುಲ್ತಾನ ವಿಜಯನಗರಕ್ಕೆ ಬಂದು ಸಂಧಾನದ ಮಾತುಕತೆ ನಡೆಸಿದರೆ ಅಹಮದನಗರದ ವಿರುದ್ಧ ಹೋರಾಡಲು ಎಲ್ಲ ಬಗೆಯ ನೆರವನ್ನು ನೀಡುವುದಾಗಿ ರಾಯಭಾರಿ ಮೂಲಕ ಅಲಿಗೆ ತಿಳಿಸಿದನು. ಇದು ಅಲಿಗೆ ಅವಹೇಳನವೆಂದೆನಿಸಿದರೂ ರಾಜಕೀಯ ಕಾರಣಗಳಿಗಾಗಿ ಅನಿವಾರ್ಯವಾಗಿ ಹೋಗಲೇಬೇಕಾಯಿತು. ಆ ಸಂದರ್ಭದಲ್ಲೇ ಅಳಿಯ ರಾಮರಾಯನ ನೆಚ್ಚಿನ ಮಗನು ಮರಣ ಹೊಂದಿದ್ದನು. ಅವನಿಗೆ ಸಂತಾಪ ಸೂಚಿಸಲು ಅಲಿಗೆ ವಿಜಯನಗರಕ್ಕೆ ಹೋಗಲು ಸದವಕಾಶವನ್ನು ಒದಗಿಸಿತು. ವಿಜಯನಗರಕ್ಕೆ ಬಂದ ಅಲಿಯನ್ನು ಅಳಿಯ ರಾಮರಾಯನು ಪ್ರೀತಿಯಿಂದ ಆದರಿಸಿ, ಮಗನಂತೆ ಕಂಡು ಮೈತ್ರಿಗೆ ಹಸಿರು ನಿಶಾನೆ ತೋರಿಸಿದನು.[೩೨] ಅಲಿ ಆದಿಲ್‌ಷಾಹ ವಿಜಯನಗರದೊಂದಿಗೆ ತನ್ನ ವಿರುದ್ಧ ಮಾಡಿಕೊಂಡ ಮೈತ್ರಿಯ ವಿಚಾರ ತಿಳಿದು ಅಹಮದನಗರದ ಸುಲ್ತಾನ ಹುಸೇನ ನಿಜಾಮ್ ಷಾ, ಗೋಲ್ಕೊಂಡದ ಕುತುಬ್ ಷಾಹನೊಂದಿಗೆ ಒಂದಾಗಿ ಅಲಿ ಆದಿಲ್ ಷಾಹ ವಿಜಯನಗರದಲ್ಲಿದ್ದ ಸಂದರ್ಭ ಸಾಧಿಸಿ ೧೫೫೮ರಲ್ಲಿ ಗುಲಬರ್ಗಾ ಕೋಟೆಗೆ ಮುತ್ತಿಗೆ ಹಾಕುವುದನ್ನು ಮುಂದುವರೆಸಿದನು. ಇದರಿಂದ ಕುಪಿತನಾದ ಅಳಿಯ ರಾಮರಾಯನು ಗೋಲ್ಕೊಂಡದ ಸುಲ್ತಾನನಿಗೆ ಪತ್ರ ಬರೆದು ಬಿಜಾಪುರದ ವಿರುದ್ಧ ಅಹಮದನಗರದ ಸುಲ್ತಾನನಿಗೆ ನೆರವು ನೀಡಬಾರದೆಂದು ಆದೇಶಿಸಿದನು.[೩೩]

ಅಳಿಯ ರಾಮರಾಯನೊಂದಿಗೆ ದ್ವೇಷ ಸಾಧಿಸಲು ಹಿಂಜರಿದ ಗೋಲ್ಕೊಂಡದ ಸುಲ್ತಾನನಾದ ಕುತುಬಷಾಹನು ಯುದ್ಧದಿಂದ ಹಿಂದೆ ಸರಿದು ಅಹಮದನಗರದ ಸುಲ್ತಾನನಿಗೆ ನಿರಾಶೆ ಉಂಟುಮಾಡಿದನು. ಇದರಿಂದ ಹತಾಶನಾದ ಹುಸೇನ ನಿಜಾಮಷಾಹ ನಿರ್ವಾಹವಿಲ್ಲದೆ ಮುತ್ತಿಗೆಯನ್ನು ಹಿಂತೆಗೆದುಕೊಂಡು ಬರಿಗೈಯಲ್ಲಿ ಅಹಮದನಗರಕ್ಕೆ ಹಿಂತಿರುಗಬೇಕಾಯಿತು. ಆದರೆ ಅಷ್ಟಕ್ಕೆ ಸುಮ್ಮನಾಗದ ಅಲಿ ಆದಿಲ್‌ಷಾಹ ಅಳಿಯ ರಾಮರಾಯನ ನೆರವನ್ನು ಪಡೆದು, ಅಹಮದನಗರದ ಸುಲ್ತಾನನಿಂದ ಶೋಲಾಪುರ ಹಾಗೂ ಕಲ್ಯಾಣ ಕೋಟೆಗಳನ್ನು ಪುನಃ ಸ್ವಾಧೀನಪಡಿಸಿಕೊಳ್ಳಲು ೧೫೫೯ರಲ್ಲಿ ಮುಂದಾದನು. ೧೫೫೯ರಿಂದ ೧೫೬೧ರವರೆಗೆ ಮೂರು ವರ್ಷ ಒಂದೇ ಸಮನಾಗಿ ಬಿಜಾಪುರ ಹಾಗೂ ವಿಜಯನಗರದ ಸೈನ್ಯಗಳು ಸಂಯುಕ್ತವಾಗಿ ಅಹಮದನಗರದ ಸುಲ್ತಾನನ ಮೇಲೆ ಯುದ್ಧ ಮಾಡಿದವು. ಆ ಯುದ್ಧಗಳಲ್ಲಿ ಕೆಲವೊಮ್ಮೆ ಬೀದರ್ ಹಾಗೂ ಗೋಲ್ಕೊಂಡಗಳು ಅಹಮದನಗರಕ್ಕೆ ಸಹಾಯ ಮಾಡುತ್ತಿದ್ದವು.[೩೪] ಆದರೆ ಈ ಯುದ್ಧಗಳಿಂದ ಯಾವುದೇ ಷಾಹಿ ರಾಜ್ಯಕ್ಕೂ ಲಾಭವಾಗದೇ ಅಳಿಯ ರಾಮರಾಯನು ಮಾತ್ರ ಬಲಿಷ್ಠನಾಗಿ ಬೆಳೆಯಲು ಸಾಧ್ಯವಾಯಿತು. ಅಹಮದನಗರದ ಸುಲ್ತಾನ ಹುಸೇನ ನಿಜಾಮಷಾಹ ನಿರಂತರ ದಾಳಿಯಿಂದ ಸೊರಗಿ ೧೫೬೧ರಲ್ಲಿ ಅಳಿಯ ರಾಮರಾಯನೊಂದಿಗೆ ಸಂಧಾನಕ್ಕೆ ಮುಂದಾದನು. ಇದರಿಂದಾಗಿ ಬಿಜಾಪುರ ರಾಜ್ಯಕ್ಕೆ ಕಲ್ಯಾಣ ಕೋಟೆ ಲಭಿಸಿತು. ಬೀದರ್‌ನ ದಂಡನಾಯಕ ಜಹಂಗೀರ್ ಖಾನನಿಗೆ ಸಂಧಾನದ ಕರಾರಿನಂತೆ ಮರಣದಂಡನೆ ವಿಧಿಸಲಾಯಿತು.[೩೫] ವಿಜಯನಗರದಲ್ಲಿ ಸಂಧಾನ ಮುಗಿಸಿ ಅಹಮದನಗರಕ್ಕೆ ಹಿಂತಿರುಗುತ್ತಿದ್ದಂತೆ, ಸುಲ್ತಾನ ನಿಜಾಮಷಾಹನು ತನ್ನ ಮಗಳು 'ಬೀಬಿಜಮಾಲಿ'ಯನ್ನು ಗೋಲ್ಕೊಂಡದ ಸುಲ್ತಾನನಿಗೆ ವಿವಾಹ ಮಾಡುವುದರ ಮೂಲಕ ಅವನೊಂದಿಗೆ ಮೈತ್ರಿ ಏರ್ಪಡಿಸಿಕೊಂಡು

ಮತ್ತೆ ೧೫೬೨ಲ್ಲಿ ಕಲ್ಯಾಣ ಕೋಟೆಗೆ ಲಗ್ಗೆ ಹಾಕಿದನು. ಅಲಿ ಆದಿಲ್‌ಷಾಹನ ನೆರವಿಗೆ ಅಳಿಯ ರಾಮರಾಯ ಧಾವಿಸಿದನು. ಹಿಂದಿನ ಯುದ್ಧದಲ್ಲಿ ತನ್ನ ದಂಡನಾಯಕನನ್ನು ಅನ್ಯಾಯವಾಗಿ ಕಳೆದುಕೊಂಡಿದ್ದ ಬೀದರ್‌ನ ದಂಡನಾಯಕ 'ತುಫಾಲಖಾನ'ನು ಪ್ರತೀಕಾರದಿಂದ ಅಹಮದನಗರದ ಪಕ್ಷ ವಹಿಸಿದನಷ್ಟೇ ಅಲ್ಲದೇ ಬೀದರ್‌ನ ಅಲಿ ಬರೀದ್‌ಷಾಹನನ್ನೂ ಒಕ್ಕೂಟ ಸೇರಲು ಆಹ್ವಾನಿಸಿತು. ಈ ಯುದ್ಧದಲ್ಲಿ ಬಿಜಾಪುರ ಮತ್ತು ವಿಜಯನಗರಗಳ ಮೈತ್ರಿಕೂಟಕ್ಕೆ ಜಯ ಲಭಿಸಿತಾದರೂ ಮಳೆಗಾಲ ಸಮೀಪಿಸುತ್ತಿದ್ದುದರಿಂದ ಆತುರಾತುರದಿಂದ ಹಿಂತಿರುಗಬೇಕಾಯಿತು. ಆದರೆ ಅಳಿಯ ರಾಮರಾಯನ ವಿರೋಧಾಭಾಸದ ಕ್ರಮಗಳು ಅಲಿ ಆದಿಲ್ ಷಾನಲ್ಲಿ ಅನುಮಾನ ಮೂಡಿಸಿದವು. ಈ ಯುದ್ಧದಿಂದ ಹಿಂತಿರುಗಿದ ನಂತರ ಅಳಿಯ ರಾಮರಾಯನು ಅಲಿ ಆದಿಲ್‌ಷಾಹನಿಂದ ಯಾದಗೀರ ಹಾಗೂ ಬಾಗಲಕೋಟೆಗಳನ್ನು ತನ್ನ ಸ್ನೇಹಕ್ಕೆ ಪ್ರತಿಫಲವಾಗಿ ಪಡೆದುಕೊಂಡನು. ಅದೇ ರೀತಿ ಗೋಲ್ಕೊಂಡದ ಸುಲ್ತಾನನಿಂದ ಕೋವಿಲ್‌ಕೊಂಡವನ್ನು ಪಡೆದುಕೊಂಡನು. ದಖ್ಖನಿಷಾಹಿ ಸುಲ್ತಾನರು ತಮ್ಮೆಲ್ಲರ ಶತ್ರು ಅಳಿಯ ರಾಮರಾಯ ಎಂಬುದನ್ನು ಮನಗಂಡು, ತಮ್ಮ ನಡುವೆ ಒಡಕನ್ನು ಅಳಿಯ ರಾಮರಾಯನು ವಿಜಯನಗರ ಸಾಮ್ರಾಜ್ಯದ ವಿಸ್ತರಣೆಗೆ ಬಳಸಿಕೊಳ್ಳುತ್ತಿರುವುದನ್ನು ಅರಿತರು. ಅದರ ಪರಿಣಾಮವಾಗಿ ವಿಜಯನಗರದ ವಿರುದ್ಧ ಸುಲ್ತಾನರ ಒಕ್ಕೂಟ ರೂಪುಗೊಂಡಿತು. ಅಹಮದನಗರದ ಸುಲ್ತಾನ ಹುಸೇನ್ ನಿಜಾಮ ಷಾಹನು, ಗೋಲ್ಕೊಂಡದ ಇಬ್ರಾಹಿಂ ಕುತುಬಷಾಹನಿಗೆ ಹಾಗೂ ಅಲಿ ಆದಿಲ್‌ಷಾಹನಿಗೆ ಅಳಿಯ ರಾಮರಾಯನ 'ಒಡೆದು ಆಳುವ ನೀತಿ'ಯನ್ನು ಮನವರಿಗೆ ಮಾಡಿಕೊಡಲು ಬಿಜಾಪುರಕ್ಕೆ ಮುಸ್ತಫಖಾನನನ್ನು ಕಳುಹಿಸಿದನು. ಇದರ ಪರಿಣಾಮವಾಗಿ ನಿಜಾಮಷಾಹ ತನ್ನ ಮಗಳು ಚಾಂದ್‌ಬೀಬಿಯನ್ನು ಅಲಿ ಆದಿಲ್‌ಷಾಹನಿಗೆ ಮದುವೆ ಮಾಡಿಕೊಟ್ಟು ಉಡುಗೊರೆಯಾಗಿ ಶೋಲಾಪುರವನ್ನು ನೀಡಿದರೆ, ಅಲಿಯು ತನ್ನ ಸೋದರಿ ಹದಿಯಾ ಸುಲ್ತಾನಳನ್ನು ಹುಸೇನನ ಮಗ ಮುರ್ತಜಾನಿಗೆ ನೀಡಿ ಮದುವೆ ಮಾಡುವುದರ ಮೂಲಕ ಎರಡು ಮನೆತನಗಳ ನಡುವೆ ಮೈತ್ರಿ ಏರ್ಪಟ್ಟು ವಿಜಾಪುರದ ಸುಲ್ತಾನನು ಅಳಿಯ ರಾಮರಾಯನ ವಿರುದ್ಧ ಒಕ್ಕೂಟಕ್ಕೆ ಸೇರಿದನು.[೬] ಬೀದರಿನ ಅಲಿಬರೀದಷಾಹನನ್ನೂ ಒಕ್ಕೂಟಕ್ಕೆ ಸೆಳೆದುಕೊಳ್ಳುವುದರ ಮೂಲಕ ದಖ್ಖನ್ ಸುಲ್ತಾನರ ಒಕ್ಕೂಟ ಸ್ವಲ್ಪ ಹೆಚ್ಚು ಕಡಿಮೆ ಪೂರ್ಣವಾದಂತಾಯಿತು.

ಹೀಗೆ ಒಗ್ಗೂಡಿದ ದಖ್ಖನಿ ಸುಲ್ತಾನರ ಒಕ್ಕೂಟದ ಮುಂದಾಳತ್ವ ವಹಿಸಿದ ಅಲಿ ಆದಿಲ್‌ಷಾಹನು, ಅಳಿಯ ರಾಮರಾಯನಿಗೆ ಇತ್ತೀಚೆಗೆ ಬಿಜಾಪುರ ಮತ್ತು ಗೋಲ್ಕೊಂಡಗಳಿಂದ ವಶಪಡಿಸಿಕೊಂಡಿರುವ ಪ್ರದೇಶಗಳನ್ನು ಹಿಂತಿರುಗಿಸುವಂತೆ ಎಚ್ಚರಿಸಿ ಪತ್ರ ಬರೆದು ಕಳುಹಿಸಿದನು. ಇದರಿಂದ ಸಿಟ್ಟಾದ ಅಳಿಯ ರಾಮರಾಯನು ಯುದ್ಧಕ್ಕೆ ಸಿದ್ಧವಾಗಿರಲು ಅಲಿಗೆ ಮರು ಎಚ್ಚರಿಸಿದನು. ಇದರಿಂದ ಅಸಮಾಧಾನಗೊಂಡ ದಖ್ಖನಿ ರಾಜ್ಯಗಳ ಪ್ರತಿನಿಧಿಗಳು ಅಳಿಯ ರಾಮರಾಯನ ಧೋರಣೆಯನ್ನು ಪ್ರತಿಭಟಿಸಿ ವಿಜಯನಗರದ ಆಸ್ಥಾನದಿಂದ ತಮ್ಮ ತಮ್ಮ ಸುಲ್ತಾನರ ಬಳಿಗೆ ತೆರಳಿದರು. ದಖ್ಖನಷಾಹಿ ಸುಲ್ತಾನರ ಸೈನ್ಯಗಳು ಶೋಲಾಪುರದಲ್ಲಿ ಸಮಾವೇಶಗೊಂಡು ೧೫೬೪ರ ಡಿಸೆಂಬರ್ ೨೬ರಂದು ಸೋಲಾಪುರದಿಂದ ಹೊರಟು ಕೃಷ್ಣೆಯಿಂದ ಉತ್ತರಕ್ಕಿದ್ದ ತಾಳಿಕೋಟೆಯ ಸಮೀಪ ಪಾಳೆಯ ಹೂಡಿದವು. ಅಳಿಯ ರಾಮರಾಯನು ತನ್ನ ಸೋದರರಾದ ತಿರುಮಲ ಹಾಗೂ ವೆಂಕಟಾದ್ರಿಯರ ನಾಯಕತ್ವದಲ್ಲಿ

ಶತ್ರುಗಳ ಮುನ್ನಡೆಯನ್ನು ನಿಯಂತ್ರಿಸಲೆಂದು, ಬೃಹತ್ ಸೈನ್ಯವನ್ನು ಕಳುಹಿಸಿದ ಹಿಂದೆಯೇ ಉಳಿದ ಸೈನ್ಯದೊಂದಿಗೆ ತಾನೂ ಕೃಷ್ಣೆಯತ್ತ ಧಾವಿಸಿದನು. ಇದನ್ನು ತಿಳಿದ ದಖ್ಖನಿ ಒಕ್ಕೂಟ ಯುದ್ಧಕ್ಕೆ ಸಜ್ಜಾಯಿತು. ಈ ಎರಡು ಶಕ್ತಿಗಳ ನಡುವಣ ನಿರ್ಣಾಯಕ ಕದನ ನಡೆದ ಸ್ಥಳದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದ್ದು, ಕೆಲವರು ರಾಯಚೂರು ಜಿಲ್ಲೆಯ ಭೋಗಾಪುರ, ಬನ್ನಹಟ್ಟಿಗಳಲೆಂದು ಅಭಿಪ್ರಾಯಪಡುತ್ತಾರೆ. ಕೆಲವರು ಇದು ಬಿಜಾಪುರ ಜಿಲ್ಲೆಯ ತಾಳಿಕೋಟೆ, ರಕ್ಕಸಗಿ ತಂಗಡಗಳೆಂದು ಅಭಿಪ್ರಾಯಪಟ್ಟರು. ಆದರೆ ಈ ಯುದ್ಧ ನಡೆದದ್ದು ರಕ್ಕಸಗಿ ತಂಡಗಡಿಯಲ್ಲಿ ಎಂಬ ನಿರ್ಣಯಕ್ಕೆ ಹೆಚ್ಚಿನ ವಿದ್ವಾಂಸರು ಬಂದಿದ್ದಾರೆ. ೧೫೬೫ರ ಜನವರಿ ೨೩ ರಂದು ಜರುಗಿದ ಭೀಕರ ಯುದ್ಧದಲ್ಲಿ ಎರಡೂ ಪಕ್ಷಗಳು ವೀರಾವೇಶದಿಂದ ಹೋರಾಡಲು ಮುಂದಾದವು. ದಖ್ಖನಿ ಒಕ್ಕೂಟದ ಸೈನ್ಯದ ಮಧ್ಯಭಾಗವನ್ನು ಹುಸೇನ ನಿಜಾಮಷಾ ಮುನ್ನಡೆಸಿದರೆ, ಬಲಭಾಗವನ್ನು ಅಲಿ ಆದಿಲ್‌ಷಾಹ ಮುನ್ನಡಸಬೇಕಾಗಿದ್ದು, ಎಡಭಾಗವನ್ನು ಬೀದರಿನ ಅಲಿಬರೀದಷಾಹ ಹಾಗೂ ಗೋಲ್ಕೊಂಡದ ಇಬ್ರಾಹಿಂ ಕುತುಬ್‌ಷಾಹ ಸಂಯುಕ್ತವಾಗಿ ಮುನ್ನಡೆಸಬೇಕಾಗಿತ್ತು. ಇದಕ್ಕೆ ಪ್ರತಿಯಾಗಿ ವಿಜಯನಗರದ ಸೈನ್ಯ ರಾಮರಾಯನ ಮತ್ತು ಅವನ ಸಹೋದರರಾದ ವೆಂಕಟಾದ್ರಿ ಹಾಗೂ ತಿರುಮಲರ ಮುಂದಾಳತ್ವದಲ್ಲಿ ಎದುರೇಟು ನೀಡಲು ಮುಂದಾಯಿತು.[೬] ವೆಂಕಟಾದ್ರಿಯ ಮುಂದಾಳತ್ವದಲ್ಲಿ ವಿಜಯನಗರದ ಸೈನ್ಯ ಅಲಿ ಆದಿಲ್‌ಷಾಹನ ಮೇಲೆ ಎರಗುವುದರೊಂದಿಗೆ ಯುದ್ಧ ಆರಂಭವಾಯಿತು. ವೆಂಕಟಾದ್ರಿಯ ದಾಳಿಗೆ ತತ್ತರಿಸಿದ ಅಲಿ ಆದಿಲ್‌ಷಾಹ ಹಿಂದೆ ಸರಿಯಬೇಕಾಯಿತು. ಇದೇ ರೀತಿ ತಿರುಮಲನ ಆಕ್ರಮಣಕ್ಕೆ ದಖ್ಖನಿ ಒಕ್ಕೂಟದ ಎಡಭಾಗವೂ ವಿಜಯ ಸಾಧಿಸಿತು. ಹೀಗೆ ಆರಂಭದಲ್ಲಿ ಶತ್ರುಕೂಟದ ಮೇಲೆ ವಿಜಯನಗರದ ಸೈನ್ಯ ಮೇಲುಗೈ ಸಾಧಿಸಿತು. ಆದರೆ ದಖ್ಖನಿ ಸೈನ್ಯದ ಮಧ್ಯಭಾಗವನ್ನು ಮುನ್ನಡೆಸುತ್ತಿದ್ದ ಹುಸೇನ ನಿಜಾಮಷಾಹ, ಅಳಿಯ ರಾಮರಾಯನ ದಾಳಿಗೆ ಅಳುಕದೆ ಫಿರಂಗಿ ದಳದ ನೆರವಿನೊಂದಿಗೆ ಶತ್ರುಗಳ ಮೇಲೆ ನಿರಂತರವಾಗಿ ಮದ್ದುಗುಂಡಿನ ಸುರಿಮಳೆಗರೆದು ವಿಜಯನಗರದ ಸೈನ್ಯದ ಮುನ್ನಡೆಯನ್ನು ನಿಯಂತ್ರಿಸುವಲ್ಲಿ ಯಶಸ್ವಿಯಾದನು. ರೋಮೀಖಾನನ ನಾಯಕತ್ವದಲ್ಲಿ ಫಿರಂಗಿದಳ ಅಳಿಯ ರಾಮರಾಯನ ಪಾಳೆಯದಲ್ಲಿ ಅರಾಜಕತೆಯನ್ನು ಮೂಡಿಸಿತು. ಇದರ ಲಾಭ ಪಡೆದ ಕಿಶ್ವರಖಾನನು ತನ್ನ ಕುದುರೆ ಪಡೆಯೊಂದಿಗೆ ಮುನ್ನುಗ್ಗಿ ಶತ್ರುಗಳು ಕಂಗಾಲಾಗುವಂತೆ ಮಾಡಿದನು. ಹುಸೇನನನ್ನು ತನ್ನ ಅಶ್ವದಳದೊಂದಿಗೆ ಮುನ್ನುಗ್ಗಿ ವಿಜಯನಗರ ಸೈನ್ಯದ ಕೇಂದ್ರಭಾಗವನ್ನು ನಿರ್ನಾಮ ಮಾಡಿದನು. ಇಂತಹ ಗೊಂದಲಮಯ ಪರಿಸ್ಥಿತಿಯಲ್ಲಿ ಆನೆಯ ಮೇಲೆ ಕುಳಿತು ತನ್ನ ಸೈನಿಕರನ್ನು ಹೋರಾಟಕ್ಕೆ ಉತ್ತೇಜಿಸುತ್ತಿದ್ದ ಅಳಿಯ ರಾಮರಾಯನು ಆಕಸ್ಮಿಕವಾಗಿ ಆನೆಯಿಂದ ಕೆಳಗೆಬಿದ್ದು ಶತ್ರುಗಳ ಕೈ ಸೆರೆಯಾದನು. ಇದನ್ನು ಕಂಡ ವಿಜಯನಗರದ ಸೇನೆ ಹೆದರಿ ದಿಕ್ಕಾಪಾಲಾಗಿ ಚದುರಿತು. ಹುಸೇನ ನಿಜಾಮಷಾಹನು ತಡ ಮಾಡದೆ ಅಳಿಯ ರಾಮರಾಯನ ತಲೆಕೆಡಿಸಿದನು. ಇದರೊಂದಿಗೆ ಅಳಿಯ ರಾಮರಾಯನ ಸರ್ವಾಧಿಕಾರತ್ವ ಅಂತ್ಯಗೊಂಡಿತು. ಈ ಯುದ್ಧ ನಡೆದಾಗ ಸದಾಶಿವರಾಯ ವಿಜಯನಗರದ ಅರಮನೆಯಲ್ಲಿ ಕೈದಿಯಂತಿದ್ದನು. ಈ ಯುದ್ಧ ವಿಜಯನಗರ ಸಾಮ್ರಾಜ್ಯದ ಅವನತಿಗೆ ನಾಂದಿ ಹಾಡಿತು.

ಅಣ್ಣ ರಾಮರಾಯನು ಸೆರೆಯಾಗಿ ಕೊಲೆಯಾದ ವಿಷಯ ತಿಳಿದು, ಅವನ ಸೋದರ ವೆಂಕಟಾದ್ರಿ ಕಣ್ಮರೆಯಾದರೆ, ತಿರುಮಲನು ಹೆದರಿದ ಸೈನ್ಯವನ್ನು ಪುನರ್ ಸಂಘಟಿಸಿ ಯುದ್ಧ ಮುಂದುವರಿಸುದುದಕ್ಕೆ ಬದಲಾಗಿ

ಹಿಮ್ಮೆಟ್ಟಿ ರಾಜಧಾನಿ ವಿಜಯನಗರಕ್ಕೆ ಧಾವಿಸಿ ಬಂದನು. ರಾಜಧಾನಿಯ ಸಂರಕ್ಷಣೆಗೆ ಚಿಂತಿಸದೆ, ಸಾರ್ವಭೌಮ ಸದಾಶಿವರಾಯನೊಂದಿಗೆ ಬೊಕ್ಕಸದ ಸಂಪತ್ತನ್ನೆಲ್ಲ ಆನೆಯ ಮೇಲೆ ಹೇರಿಕೊಂಡು ರಾಣಿವಾಸದೊಂದಿಗೆ ಸುರಕ್ಷಿತವಾದ ಪೆನುಗೊಂಡೆಯತ್ತ ಸಾಗಿದನು. ರಕ್ಷಣೆ ಇಲ್ಲದ ರಾಜಧಾನಿ ಪಟ್ಟಣವನ್ನು ಸುತ್ತಮುತ್ತಲಿನ ಗುಡ್ಡಗಾಡುಗಳಲ್ಲಿದ್ದ ಕಳ್ಳಕೋರರು ಲೂಟಿ ಮಾಡಿದರು. ಅಣ್ಣ ರಾಮರಾಯನು ಈ ಹಿಂದೆ ವಿವಿಧ ಷಾಹಿ ಸುಲ್ತಾನರುಗಳಿಂದ ವಶಪಡಿಸಿಕೊಂಡಿದ್ದ ಪ್ರದೇಶಗಳೊಂದಿಗೆ ಅಪಾರ ಸಂಪತನ್ನು ಯುದ್ಧ ದಂಡವಾಗಿ ಷಾಹಿ ಒಕ್ಕೂಟಕ್ಕೆ ಹಿಂತಿರುಗಿಸುವುದರ ಮೂಲಕ ವೆಂಕಟಾದ್ರಿಯು ಅವರೊಂದಿಗೆ ಸಂಧಾನ ಮಾಡಿಕೊಂಡನು. ವಿಜಯನಗರಕ್ಕೆ ಬದಲಾಗಿ ಪೆನುಗೊಂಡೆಯಿಂದ ಸದಾಶಿವರಾಯನ ಕಾರ್ಯಕರ್ತನಾಗಿ ಸಾಮ್ರಾಜ್ಯದ ಆಡಳಿತ ನಡೆಸಲು ನಿರ್ಧರಿಸಿದನು.[೩೮]

ಹೀಗೆ ತಮ್ಮೆಲ್ಲರ ಶತ್ರುವಾಗಿದ್ದ ಅಳಿಯ ರಾಮರಾಯನನ್ನು ಸದೆ ಬಡಿಯುವಲ್ಲಿ ಯಶಸ್ವಿಯಾದ ದಖನಿ ಒಕ್ಕೂಟ, ಅಳಿಯ ರಾಮರಾಯನ ನಿಧನದ ನಂತರ ಮತ್ತೆ ತಮ್ಮ ತಮ್ಮಲ್ಲೇ ಕಚ್ಚಾಡತೊಡಗಿದರು. ಅಲಿ ಆದಿಲ್‌ಷಾಹನು ಅಹಮದನಗರದ ಮುರ್ತುಜಾ ನಿಜಾಮನೊಂದಿಗೆ ಕೂಡಿಕೊಂಡು, ಪೋರ್ಚುಗೀಸರನ್ನು ರಾಜ್ಯದ ಕರಾವಳಿ ಪ್ರದೇಶದಿಂದ ಹೊರದೂಡಲು ಯತ್ನಿಸಿದನಾದರೂ ಅಂತಿಮವಾಗಿ ಗೆಲುವು ಪೋರ್ಚುಗೀಸರದಾಯಿತು. ಮುಂದೆ ೧೫೭೧ರಲ್ಲಿ ಅಲಿ ಆದಿಲ್‌ಷಾಹ, ಪೋರ್ಚುಗೀಸರೊಂದಿಗೆ ಒಪ್ಪಂದ ಮಾಡಿಕೊಂಡನು. ಮತ್ತೆ ೧೫೭೫ ಹಾಗೂ ೧೫೭೬ರಲ್ಲಿ ಪೋರ್ಚುಗೀಸರೊಂದಿಗೆ ಆರ್ಮೋಜ್‌ನಿಂದ ಕುದುರೆಗಳನ್ನು ಗೋವಾ ಮೂಲಕ ಖರೀದಿಸಲು ಸ್ವತಂತ್ರನಾದನು. ಅದಕ್ಕಾಗಿ ಅವನು ಪ್ರತಿ ಕುದುರೆಗೆ ೪೦ ಟಂಕಗಳನ್ನು ಸುಂಕವಾಗಿ ಪೋರ್ಚುಗೀಸರಿಗೆ ನೀಡುವಂತಾಯಿತು. ಆ ವೇಳೆಗಾಗಲೇ ಉತ್ತರ ಭಾರದಲ್ಲಿ ಭದ್ರವಾಗಿ ತಳವೂರಿದ್ದ ಮೊಗಲ್ ಸಾಮ್ರಾಜ್ಯದ ಶ್ರೇಷ್ಠ ದೊರೆಯಾದ ಅಕ್ಬರನು (೧೫೫೬-೧೬೦೬) ೧೫೭೫ರ ವೇಳೆಗೆ ಉತ್ತರ ಭಾರತದ ಮೇಲೆ ಹಿಡಿತ ಹೊಂದಿದ್ದು, ಸುಮಾರು ೧೫೭೬ರಲ್ಲಿ ತನ್ನ ಸಾರ್ವಭೌಮತ್ವವನ್ನು ಅಲಿ ಆದಿಲ್‌ಷಾಹನಿಗೆ ಮನವರಿಕೆ ಮಾಡಿಕೊಡುವ ಸಲುವಾಗಿ 'ಐನ್-ಉಲ್-ಮುಲ್ಕ ಶಿರಾಜಿ'ಯನ್ನು ಮೊಗಲ್ ಪ್ರತಿನಿಧಿಯನ್ನಾಗಿ ವಿಜಾಪುರಕ್ಕೆ ಕಳುಹಿಸಿದನು. ಅವನನ್ನು ಗೌರವದಿಂದ ಸ್ವೀಕರಿಸಿದ ಅಲಿಯು ಶಿರಾಜಿಯೊಂದಿಗೆ, 'ರಷೂದ್-ಉಲ್-ಮುಲ್ಕ'ನನ್ನು ತನ್ನ ಪ್ರತಿನಿಧಿಯಾಗಿ ಅಕ್ಬರನ ಆಸ್ಥಾನಕ್ಕೆ ಕಳುಹಿಸಿದನು. ಇದಕ್ಕೆ ಪ್ರತಿಯಾಗಿ ಅಲಿಯ ಪ್ರತಿನಿಧಿಯೊಂದಿಗೆ ಬಿಜಾಪುರಕ್ಕೆ ಬಂದ ಮೊಗಲ್ ಅಧಿಕಾರ ಹಕೀಮ್ ಅಲಿ ಗಿಲಾನಿಯು, ಅಕ್ಬರನನ್ನು ಎದುರು ಹಾಕಿಕೊಂಡರೆ ಯುದ್ಧ ಎದುರಿಸಬೇಕಾದೀತೆಂದು ಅಲಿಗೆ ಎಚ್ಚರಿಕೆ ನೀಡಿದನು. ಹೀಗೆ ಮೊಗಲರ ಸಂಪರ್ಕ ಮೊದಲ ಬಾರಿಗೆ ಬಿಜಾಪುರದೊಂದಿಗೆ ಅಲಿಯ ಅಧಿಕಾರಾವಧಿಯಲ್ಲಿ ಆಯಿತು.

ಈನಡುವೆ ನಿಜಾಮಷಾಹನು ಒಪ್ಪಂದದಂತೆ ಬೀದರನ್ನು ವಶಪಡಿಸಿಕೊಳ್ಳಲು ಮುಂದಾದಾಗ, ಅಲಿಯು ತಟಸ್ಥನಾಗಿ ಉಳಿಯದೆ, ಅಲಿ ಬರೀದಷಾಹನ ಕೋರಿಕೆಯಂತೆ ನಿಜಾಮಷಾಹನ ವಿರುದ್ಧ ನೆರವು ನೀಡಲು ಮುಂದಾದನು. ಈ ನೆರವಿನಿಂದಾಗಿ ಬರೀದನು ತನ್ನ ನೆಚ್ಚಿನ ಈರ್ವರೂ ಶಿಖಂಡಿಗಳನ್ನು ಅಲಿಯ ಮನರಂಜನೆಗಾಗಿ ಕಳುಹಿಸಬೇಕಾಗಿ ಬಂತು. ಮುಂದೆ ಇವರಲ್ಲೊಬ್ಬ ೧೫೮೦ರ ಏಪ್ರಿಲ್ ತಿಂಗಳಲ್ಲಿ ಚೂರಿ ಹಾಕಿ ಸುಲ್ತಾನ ಅಲಿಯನ್ನು

ಕೊಂದನು. ಸತ್ತ ಸುಲ್ತಾನನ ಶವವನ್ನು ರಾಜಧಾನಿ ಬಿಜಾಪುರದಲ್ಲಿ ಸಮಾಧಿ ಮಾಡಲಾಯಿತು. ಅಲಿ ಆದಿಲ್‌ಷಾಹನಿಗೆ ಮಕ್ಕಳಿರದಿದ್ದುದರಿಂದ ಕಾರಣ ಅವನ ಸೋದರನ ಮಗ ಒಂಬತ್ತು ವರ್ಷದ ಬಾಲಕ ಎರಡನೇ ಇಬ್ರಾಹಿಂ ಆದಿಲ್‌ಷಾನನ್ನು ಪಟ್ಟಕ್ಕೆ ತರಲಾಯಿತು. ಅವನು ಇನ್ನೂ ಬಾಲಕನಿದ್ದುದರಿಂದ ರಾಜಮಾತೆ ಚಾಂದ್‌ಬೀಬಿಯು ಸುಲ್ತಾನನ ಜವಾಬ್ದಾರಿಯನ್ನು ಹೊತ್ತಳು ಹಾಗೂ ಅವನ ರಾಜಪ್ರತಿನಿಧಿಯಾಗಿ ಆಳ್ವಿಕೆ ಪ್ರಾರಂಭಿಸಿದಳು.

**ಟಿಪ್ಪಣಿಗಳು**

೧. ಕೃಷ್ಣ ಕೊಲ್ಹಾರ ಕುಲಕರ್ಣಿ, ಕಿತಾಬೆ ನೌರಸ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬, ಪುಟ.೧

೨. ಅದೇ, ಪುಟ.೧

೩. ಶೇಕ್‌ಅಲಿ ಬಿ., ಕರ್ನಾಟಕ ಚರಿತ್ರೆ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪುಟ.೨೪

೪. ಮುನಿಸ್ವಾಮಿ ಆರ್., ಬಿಜಾಪುರ ಜಿಲ್ಲೆ ಗ್ಯಾಸೆಟಿಯರ್, ಬೆಂಗಳೂರು, ಪುಟ.೧೨೧

೫. ಮಜುಂದಾರ್ ಆರ್.ಸಿ., ದೆಹಲಿ ಸುಲ್ತಾನರ ಆದಿಪತ್ಯ, ಭಾಗ-೧, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧, ಪುಟ.೩೮೧

೬. ಶೇಕ್‌ಅಲಿ.ಬಿ., ಪೂರ್ವೋಕ್ತ, ಪುಟ.೨೬

೭. ಅದೇ, ಪುಟ.೨೭

೮. ದಿವಾಕರ ಆರ್.ಆರ್., ಪೂರ್ವೋಕ್ತ, ಪುಟ.೬೦

೯. ರಾಬರ್ಟ್ ಸಿವೆಲ್, ಸದಾನಂದಕನವಳ್ಳಿ (ಅನು), ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪುಟ.೩೬

೧೦. ಶೇಕ್‌ಅಲಿ ಬಿ., ಪೂರ್ವೋಕ್ತ, ಪುಟ.೪೧

೧೧. ಮಜುಂದಾರ್ ಆರ್.ಸಿ., ಪೂರ್ವೋಕ್ತ, ಪುಟ.೩೯೫

೧೨. ಮುನಿಸ್ವಾಮಿ ಆರ್., ಪೂರ್ವೋಕ್ತ, ಪುಟ.೧೨೨

೧೩. ಶೇಕ್‌ಅಲಿ ಬಿ., ಪೂರ್ವೋಕ್ತ, ಪುಟ.೭೨

೧೪. ಬಸವರಾಜ ಕೆ.ಆರ್., ಹಿಸ್ಟರಿ ಆ್ಯಂಡ್ ಕಲ್ಚರ್ ಆಫ್ ಕರ್ನಾಟಕ, ಚಾಲುಕ್ಯ ಪಬ್ಲಿಶ್, ಧಾರವಾಡ, ೧೯೮೪, ಪುಟ,೧೮೭

೧೫. ಮಜುಂದಾರ್ ಆರ್.ಸಿ., ಮೊಗಲ್ ಸಾಮ್ರಾಜ್ಯ, ಭಾಗ-೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೩, ಪುಟ.೨೨೨

೧೬. ಬಸವರಾಜ ಕೆ.ಆರ್., ಪೂರ್ವೋಕ್ತ, ಪು.೧೮೮

೧೭. ಶೇಕ್‌ಅಲಿ ಬಿ., ಪೂರ್ವೋಕ್ತ, ಪುಟ.೭೮

೧೮. ಮುನಿಸ್ವಾಮಿ ಆರ್., ಪೂರ್ವೋಕ್ತ, ಪುಟ.೧೨೮

೧೯. ಗ್ರೇಬಲ್ ಜೆ.ಡಿ.ಇ., ಹಿಸ್ಟರಿ ಆಫ್ ದಿ ಡೆಕ್ಕನ್, ಸಂಪುಟ-೨, ನವದೆಹಲಿ ೧೯೯೧, ಪುಟ.೧೫೮

೨೦. ಅದೇ, ಪುಟ.೧೫೮

೨೧. ಅದೇ, ಪುಟ.೧೬೧

೨೨. ಅದೇ, ಪುಟ.೧೬೩

೨೩. ಶೇರವಾನಿ ಎಚ್.ಕೆ., ಆ್ಯಂಡ್ ಜೋಷಿ ಪಿ.ಎಂ, ಹಿಸ್ಟರಿ ಆಫ್ ದಿ ಮಿಡೀವಲ್ ಡೆಕ್ಕನ್, ವಾಲ್ಯುಮ್-೧, ಪಬ್ಲಿಶ್ಡ್ ಅಂಡರ್ ದಿ ಅಥಾರಿಟಿ ಆಫ್ ದಿ ಗೌರ್ನಮೆಂಟ್ ಆಫ್ ಆಂಧ್ರಪ್ರದೇಶ, ಹೈದ್ರಾಬಾದ್, ೧೯೭೩, ಪುಟ.೩೦೮

೨೪. ಅದೇ, ಪುಟ.೩೦೮-೩೦೯

೨೫. ಅದೇ, ಪುಟ.೩೧೬

೨೬. ಅದೇ, ಪುಟ.೩೧೭

೨೭. ಷೇಕ್‌ಅಲಿ ಬಿ., ಪೂರ್ವೋಕ್ತ, ಪುಟ.೮೧

೨೮. ಅದೇ, ಪುಟ.೮೧

೨೯. ಅದೇ, ಪುಟ.೮೨

೩೦. ಅದೇ, ಪುಟ.೮೩

೩೧. ಅದೇ, ಪುಟ.೮೪

೩೨. ಗ್ರೇಬಲ್ ಜೆ.ಡಿ.ಇ., ಪೂರ್ವೋಕ್ತ, ಪುಟ.೧೯೦

೩೩. ಅದೇ, ಪುಟ.೧೯೦

೩೪. ಅದೇ, ಪುಟ.೧೯೧

೩೫. ಅದೇ, ಪುಟ.೧೯೧

೩೬. ಅದೇ, ಪುಟ.೧೯೨

೩೭. ಅದೇ, ಪುಟ.೧೯೩

೩೮. ಅದೇ, ಪುಟ.೧೯೫

* * *

ಅಧ್ಯಾಯ ಮೂರು

## ಚಾಂದ್‌ಬೀಬಿಯ ಜೀವನ (೧೫೫೦-೧೫೯೯)

೩.೧. ಚಾಂದ್‌ಬೀಬಿಯ ಬಾಲ್ಯ ಹಾಗೂ ಶಿಕ್ಷಣ

೩.೨. ಚಾಂದ್‌ಬೀಬಿಯ ವೈವಾಹಿಕ ಸಂಬಂಧ

೩.೨.೧. ಅಲಿ ಆದಿಲ್‌ಷಾಹನ ಜೊತೆ ಚಾಂದ್‌ಬೀಬಿಯ ವಿವಾಹ

೩.೩. ಬಿಜಾಪುರದಲ್ಲಿ ಅಧಿಕಾರ

೩.೩.೧. ಅಲಿ ಆದಿಲ್‌ಷಾಹನ ಮರಣ (೧೫೮೦)

೩.೩.೨. ಚಾಂದ್‌ಬೀಬಿಯ ಮೇಲೆ ಪ್ರಭಾವ ಬೀರಿದ ಅಂಶ

೩.೩.೩. ಬಿಜಾಪುರದಲ್ಲಿ ಅಧಿಕಾರ ಪಡೆದ ಬಗೆ

# ಚಾಂದ್‌ಬೀಬಿಯ ಜೀವನ (೧೫೫೦-೧೫೯೯)

ಮಧ್ಯಕಾಲೀನ ದಕ್ಷಿಣ ಭಾರತದ ಇತಿಹಾಸದಲ್ಲಿ ಚಾಂದ್‌ಬೀಬಿ ಅಥವಾ ಚಾಂದ್‌ಸುಲ್ತಾನಳ ಹೆಸರು ಪ್ರಮುಖವಾದದ್ದು. ಇವಳು ದಕ್ಷಿಣ ಭಾರತದ ಕೆಲವೇ ಕೆಲವು ವೀರ ವನಿತೆಯರಲ್ಲಿ ಒಬ್ಬಳು. ಬಿಜಾಪುರ ಮತ್ತು ಅಹಮದನಗರ ರಾಜ್ಯಗಳನ್ನು ತನ್ನ ಹತೋಟಿಗೆ ತಂದು ರಾಜ್ಯಭಾರ ಮಾಡಿದ ಕೀರ್ತಿ ಚಾಂದ್‌ಬೀಬಿಗೆ ಸಲ್ಲುತ್ತದೆ.

## ೩.೧. ಚಾಂದ್‌ಬೀಬಿಯ ಬಾಲ್ಯ ಹಾಗೂ ಶಿಕ್ಷಣ

ಚಾಂದ್‌ಬೀಬಿಯ ಹುಟ್ಟು ಮತ್ತು ಬಾಲ್ಯ ಜೀವನದ ಬಗ್ಗೆ ಹೆಚ್ಚಿನ ಮಾಹಿತಿಗಳು ಸಿಗುವುದಿಲ್ಲ ಎನ್ನುವುದು ಇತಿಹಾಸಕಾರರ ಅಭಿಪ್ರಾಯವಾಗಿದೆ. 'ತಾರೀಖಿ-ಎ-ಶಾಹಬಿ' ಎಂಬ ಗ್ರಂಥದ ಪ್ರಕಾರ ಚಾಂದ್‌ಬೀಬಿಯು ಮೃತಪಟ್ಟಾಗ ಅವಳ ವಯಸ್ಸು ಐವತ್ತು ವರ್ಷವಾಗಿತ್ತು.[೧] ಅದರ ಪ್ರಕಾರ ಚಾಂದ್‌ಬೀಬಿಯು ಹಿಜಿರಾ ಶಕೆ ೯೫೭ರಲ್ಲಿ (೧೫೫೦) ಅಹಮದನಗರದಲ್ಲಿ[೨] ಒಂದನೇ ಹುಸೇನ್ ನಿಜಾಮಷಾಹ ಮತ್ತು ಖೂನ್‌ಜಾ ಹುಮಾಯೂನ್ ದಂಪತಿಗಳ ಮಗಳಾಗಿ ಹುಟ್ಟಿದಳು. 'ಟೇಲ್ಸ್ ಆಫ್ ಅಹಮದ್‌ನಗರ' ಕೃತಿಯು ಚಾಂದ್‌ಬೀಬಿಯ ಜೀವನದ ವಿಚಾರಗಳನ್ನು ಈ ರೀತಿ ಬಣ್ಣಿಸುತ್ತದೆ, ''ಇವಳಿಗೆ ಮುರ್ತಜಾ ಹಾಗೂ ಎರಡನೇ ಬರ್ಹಾನ್ ಎಂಬ ಇಬ್ಬರು ಸಹೋದರರು ಇದ್ದರು. ಇವಳಿಗೆ ಬಾಲ್ಯದಲ್ಲಿ ಶಿಕ್ಷಣ ನೀಡಲಾಯಿತು. ಇವಳು ಎಷ್ಟೊಂದು ಚಾಣಾಕ್ಷಳಾಗಿದ್ದಳು ಎಂದರೆ ಬಹುಬೇಗನೆ ಅರೇಬಿಕ್, ಪರ್ಷಿಯನ್ ಮತ್ತು ಟರ್ಕಿ ಭಾಷೆಗಳನ್ನು ಕಲಿತಳು. ಅಲ್ಲದೇ ಆ ಭಾಷೆಗಳಲ್ಲಿ ಸ್ಪಷ್ಟವಾಗಿ ಮಾತನಾಡುತ್ತಿದ್ದಳು. ಅವಳು ಸಂಗೀತ ಮತ್ತು ಚಿತ್ರಕಲೆಯಲ್ಲಿಯೂ ಅಭಿರುಚಿ ಹೊಂದಿದ್ದಳು. ಇವುಗಳ ಜೊತೆ ಜೊತೆಗೆ ಕುದುರೆ ಸವಾರಿ, ಕತ್ತಿ ತಿರುಗಿಸುವುದು, ಯುದ್ಧದ ರಣತಂತ್ರ ರೂಪಿಸುವುದರ ತರಬೇತಿಯನ್ನು ಪಡೆದಿದ್ದಳು. ಚಾಂದ್‌ಬೀಬಿಯು ನೋಡಲು ಅಸಾಮಾನ್ಯ ಸೌಂದರ್ಯವತಿಯಾಗಿದ್ದಳು. ಅವಳ ಹಿಂಸಾತ್ಮಕ ಹತ್ಯೆಯವರೆಗೂ ಅವಳ ಸೌಂದರ್ಯವು ಕಳೆಗುಂದಲಿಲ್ಲ. ಚಾಂದ್‌ಬೀಬಿಯು ಯಾವಾಗಲೂ ಅಂದವಾದ ವಸ್ತ್ರಗಳನ್ನು ಧರಿಸುತ್ತಿದ್ದಳು. ಜೇನು ಬೀಗಿದ ಅಶ್ವದ ಸವಾರಿಯನ್ನು ಮಾಡುತ್ತಿದ್ದಳು. ಅವಳು ಯಾವಾಗಲೂ ಮುಖವಾಡವನ್ನು ಧರಿಸುತ್ತಿದ್ದಳು. ಆದರೆ ಅವಳು ಎಂದಿಗೂ ಸಾಮಾನ್ಯವಾದ ವಸ್ತ್ರಗಳನ್ನು ಬಳಸುತ್ತಿರಲಿಲ್ಲ.''[೩] ಚಾಂದ್‌ಬೀಬಿಯು ಸೌಂದರ್ಯದ ಬಗ್ಗೆ ಪರ್ಷಿಯನ್ ಕಲಾವಿದ ಅವಳ ಚಿತ್ರ ಬಿಡಿಸಿ ಈ ರೀತಿ ತಿಳಿದ್ದಾನೆ. ''ಅವಳ ಕಣ್ಣುಗಳು ನೀಲಿ-ಕಂದುಬಣ್ಣ, ಕಪ್ಪು ಕಣ್ಣುರೆಪ್ಪೆ, ಅಂದವಾದ ಮುಗುಳ್ನಗೆಯನ್ನು ಹೊಂದಿದ್ದಳು.''[೪] ಚಾಂದ್‌ಬೀಬಿಯು ಎಷ್ಟೊಂದು

ಸಾಹಸಮಯಳಾಗಿದ್ದಳು ಎಂದರೆ ಬಿಜಾಪುರ ಮತ್ತು ಅಹಮದನಗರದ ಸುಲ್ತಾನರ ಸರಿಸಮಾನಳು ಎಂದು ಇತಿಹಾಸದಲ್ಲಿ ಗುರುತಿಸಿಕೊಂಡಿದ್ದಾಳೆ.

**೩.೨. ಚಾಂದ್‌ಬೀಬಿಯ ವೈವಾಹಿಕ ಸಂಬಂಧ**

ಅಹಮದನಗರ ಮತ್ತು ಬಿಜಾಪುರ ನಡುವೆ ವೈವಾಹಿಕ ಸಂಬಂಧ ಬೆಳೆಯಲು ಕಾರಣವೆಂದರೆ, ಈ ಎರಡು ರಾಜ್ಯಗಳ ನಡುವೆ ನಿರಂತರ ನಡೆಯುತ್ತಿದ್ದ ಯುದ್ಧಗಳು ಹಾಗೂ ವಿಜಯನಗರ ಸಾಮ್ರಾಜ್ಯದ ಅರಸ ಅಳಿಯರಾಮರಾಯನ ವಿದೇಶಾಂಗ ನೀತಿ. ಅಲಿ ಆದಿಲ್‌ಷಾಹ ೧೫೫೮ರಲ್ಲಿ ರಾಮರಾಯನೊಂದಿಗೆ ಒಪ್ಪಂದ ಮಾಡಿಕೊಂಡು ಅಹಮದನಗರದ ಸುಲ್ತಾನ ಹುಸೇನ್ ಷಾಹನ ವಶದಲ್ಲಿರುವ ಶೋಲಾಪುರ ಮತ್ತು ಕಲ್ಯಾಣ ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತಾನೆ[೫]. ಅಳಿಯ ರಾಮರಾಯನೊಂದಿಗೆ ಮೈತ್ರಿ ಮಾಡಿಕೊಳ್ಳುವ ಉದ್ದೇಶವೇ ಇದಾಗಿತ್ತು. ಬಿಜಾಪುರ ಮತ್ತು ಅಹಮದನಗರಗಳ ಮಧ್ಯೆ ಕ್ರಿ.ಶ. ೧೫೫೮ರಿಂದ ೧೫೬೧ರವರೆಗೆ ಮೂರು ವರ್ಷಗಳ ಕಾಲ ನಿರಂತರ ಯುದ್ಧ ನಡೆಯಿತು[೬]. ವಿಜಯನಗರ ಬಿಜಾಪುರಕ್ಕೆ ಬೆಂಬಲ ನೀಡಿದರೆ, ಅಹಮದನಗರಕ್ಕೆ ಬೀರಾರ್ ಹಾಗೂ ಗೋಲ್ಕೊಂಡ ರಾಜ್ಯಗಳು ಸಹಾಯ ಮಾಡುತ್ತಿದ್ದವು. ಈ ಮೂರು ವರ್ಷಗಳ ಅವಧಿ ಹುಸೇನ್ ನಿಜಾಮ ಷಾಹನಿಗೆ ಕರಾಳ ದಿನಗಳಾಗಿದ್ದವು. ಅಳಿಯ ರಾಮರಾಯನ ಗ್ರಹಗತಿ ಏರುವ ಸ್ಥಿತಿಯಲ್ಲಿತ್ತು. ಆ ಕಾಲದ ರಾಜಕಾರಣದಲ್ಲಿ ಅವನು ಕೇಂದ್ರ ವ್ಯಕ್ತಿಯಾಗಿದ್ದನು. ಷಾಹಿ ರಾಜ್ಯಗಳ ನಿರರ್ಥಕ ಯುದ್ಧಗಳಿಂದ ನಿಜವಾಗಿ ಲಾಭವಾಗುತ್ತಿದ್ದುದು ಅಳಿಯ ರಾಮರಾಯನಿಗೆ. ನಿಜಾಮ ಷಾಹನ ಅಹಮದನಗರ ರಾಜ್ಯವು ಅಪಾರವಾದ ನಷ್ಟವನ್ನು ಅನುಭವಿಸಿ ತುಂಬಾ ದುಃಸ್ಥಿತಿಗೆ ಬಂದಿತ್ತು ಹಾಗೂ ಅದೇ ಸ್ಥಿತಿ ಮುಂದುವರೆದಿತ್ತು. ತನ್ನ ರಾಜ್ಯವು ಇನ್ನೂ ಹೆಚ್ಚಿನ ದುಃಸ್ಥಿತಿಗೆ ಇಳಿಯುವುದನ್ನು ತಡೆಯಲು ನಿಜಾಮನು ತನ್ನ ಶತ್ರುಗಳೊಂದಿಗೆ ಆ ಕೂಡಲೇ ಶಾಂತಿ, ಸಂಧಾನ ಮಾಡಿಕೊಳ್ಳುವುದು ತೀರ ಅಗತ್ಯವೆಂದು ಭಾವಿಸಿಕೊಂಡನು. ಈ ಉದ್ದೇಶದಿಂದಲೇ ಶಾಂತಿ ಸೌಹಾರ್ದವನ್ನು ಕೋರಿ ಅಳಿಯ ರಾಮರಾಯನ ಬಳಿಗೆ ರಾಯಭಾರಿಗಳನ್ನು ಕಳುಹಿಸಿದನು. ಅಂತೂ ಕೊನೆಗೆ ಅಳಿಯ ರಾಮರಾಯನ ಜೊತೆಗೆ ೧೫೬೧ರಲ್ಲಿ ಹೀನಾಯಕರವಾದ ಒಪ್ಪಂದಕ್ಕೆ ಸಹಿ ಮಾಡಬೇಕಾಯಿತು.[೬] ಈ ಒಪ್ಪಂದದ ಕೆಲವು ಷರತ್ತುಗಳು ಯಾವುವೆಂದರೆ,

೧. ಹುಸೇನ್‌ನು ಬಿಜಾಪುರಕ್ಕೆ ಕಲ್ಯಾಣವನ್ನು ಹಿಂದಕ್ಕೆ ಒಪ್ಪಿಸತಕ್ಕದ್ದು.

೨. ಮಿತ್ರಸೇನೆಗೆ ಕಳವಳವುಂಟುಮಾಡಿದ್ದ ಜಹಾಂಗೀರ್ ಖಾನನಿಗೆ ಮರಣ ದಂಡನೆ ವಿಧಿಸಬೇಕು.

೩. ಹುಸೇನ್ ನೇರವಾಗಿ ತಾನೇ ರಾಮರಾಯನ ಬಳಿಗೆ ಬಂದು ಶರಣಾಗಬೇಕು[೮].

ಹುಸೇನ್‌ನಿಗೆ ಬೇರೆ ದಾರಿಯಿಲ್ಲದೇ ಈ ಎಲ್ಲ ಷರತ್ತುಗಳಿಗೂ ಒಪ್ಪಿಕೊಂಡನು. ಅದರಂತೆ ಜಹಾಂಗೀರ್‌ಖಾನನಿಗೆ ಮರಣದಂಡನೆ ವಿಧಿಸಲು ಒಪ್ಪಿದ್ದು ಅವನ ಸಂಪೂರ್ಣ ಅಸಹಾಯಕತೆಯನ್ನು ತೋರಿಸಿತು. ಕಲ್ಯಾಣವನ್ನು ಒಪ್ಪಿಸಿಕೊಟ್ಟಿದ್ದು ಇನ್ನೊಂದು ಯುದ್ಧಕ್ಕೆ ಬೀಜವನ್ನು ಬಿತ್ತಿತು. ತಾನೇ ಹೋಗಿ ಅಳಿಯ ರಾಮರಾಯನಿಗೆ ಶರಣಾಗಬೇಕೆನ್ನುವುದು ಗಾಯಕ್ಕೆ ಉಪ್ಪುಉಜ್ಜಿದ ಹಾಗಾಗಿತ್ತು. ಅವನ ಆತ್ಮಗೌರವ ಅದನ್ನು ತಡೆದುಕೊಳ್ಳಲಿಲ್ಲ. ಅಳಿಯ ರಾಮರಾಯನ ವಿಜಯನಗರದ ಸಮಾಧಿಯನ್ನು ಅಗೆಯುತ್ತಿದ್ದನು.[೯]

ಹುಸೇನ್ ನಿಜಾಮ್‌ಷಹಾ ಸುಮ್ಮನಾಗಲಿಲ್ಲ. ಅಳಿಯ ರಾಮರಾಯ ಮತ್ತು ಅಲಿ ಆದಿಲ್‌ಷಾಹನ ವಿರುದ್ಧ ಸೇಡು ತೀರಿಸಿಕೊಳ್ಳಲು ಅವಕಾಶಕ್ಕಾಗಿ ಕಾಯುತ್ತಲೇ ಇದ್ದನು. ಇದೇ ಉದ್ದೇಶಕ್ಕಾಗಿಯೇ ಅವನು ಇಬ್ರಾಹಿಂ ಕುತುಬ್‌ಷಹಾನನ್ನು ಕಲ್ಯಾಣಿಯ ಆಸುಪಾಸು ಭೇಟಿ ಮಾಡಿದನು. ತನ್ನ ಮಗಳಾದ ಜಮಾಲ್‌ಬೀಬಿಗೆ ಇಬ್ರಾಹಿಂ ಕುತುಬ್ ಷಾಹನೊಂದಿಗೆ ವಿವಾಹ ನೆರವೇರಿಸಿ, ತನ್ನ ಶಕ್ತಿಯನ್ನು ಹೆಚ್ಚಿಸಿಕೊಂಡನು.

ಕ್ರಿ.ಶ.೧೫೬೩ರಲ್ಲಿ ವಿವಾಹ ಸಮಾರಂಭಗಳು ಮುಗಿಯುತ್ತಿದ್ದಂತೆಯೇ ಅವರು ಇಬ್ಬರು ಕೂಡಿಕೊಂಡು ಕಲ್ಯಾಣದ ಮೇಲೆ ದಾಳಿ ಮಾಡಿದರು. ಒಂದನೇ ಆಲಿ ಆದಿಲ್‌ಷಾಹನು ಮತ್ತೆ ಅಳಿಯ ರಾಮರಾಯನ ನೆರವು ಕೋರಿದನು. ಒಡನೆಯೇ ವಿಜಯನಗರ ಸೈನ್ಯದೊಂದಿಗೆ ಬಂದು, ಹುಸೇನ್ ಮಾಡಿದ ಕೆಲಸ ತನ್ನ ಗೌರವಕ್ಕೆ ಕುಂದು ತಂದ ಹಾಗೆ ಎಂದು ಭಾವಿಸಿದನು. ನಿಜಾಮ ಷಾಹನಿಗೆ ವೈರಿ ಸೇನೆಯನ್ನು ಎದುರಿಸಲು ಸಾಧ್ಯವಾಗಲಿಲ್ಲ. ರಣರಂಗದಿಂದ ವೇಗವಾಗಿ ಅಹಮದನಗರಕ್ಕೆ ಹಿಂದಿರುಗಿ ಭದ್ರವಾಗಿ ಕುಳಿತುಕೊಂಡನು. ಮಿತ್ರ ಸೇನೆಗಳು ನಿಜಾಮ ಷಾಹನನ್ನು ಶಾಂತವಾಗಿರಲು ಬಿಡಲಿಲ್ಲ. ಅವನ ಬಲವಾದ ಕೋಟೆ ಜುನ್ನಾರಿಗೆ ಮುತ್ತಿಗೆ ಹಾಕಿದವು. ನಿಜಾಮ ಷಾಹನ ಅದೃಷ್ಟ, ಅಷ್ಟರಲ್ಲಿ ಮುಂಗಾರು ಮಳೆ ಪ್ರಾರಂಭವಾಗಿತ್ತು ಮಳೆಯಿಂದಾಗಿ ನಿಜಾಮ ಷಾಹನನ್ನು ನಾಶ ಮಾಡಲು ಸಾಧ್ಯವಾಗಲಿಲ್ಲ. ಅಲ್ಲದೇ ಅಭಿಪ್ರಾಯಗಳು ತುಸು ಬೇರೆಯಾದವು. ಹುಸೇನ್ ನಿಜಾಮ ಷಾಹನನ್ನು ಸಂಪೂರ್ಣವಾಗಿ ನಾಶ ಮಾಡುವುದನ್ನು ಆಲಿ ಆದಿಲ್‌ಷಾಹನು ಇಷ್ಟಪಡಲಿಲ್ಲ. ಎಲ್ಲರಿಗೂ ಈಗ ಅಳಿಯ ರಾಮರಾಯನ ಮೇಲೆ ಸಂದೇಹ ಬರತೊಡಗಿತ್ತು. ಅವನಿಗೆ ನಿಜವಾಗಿಯೂ ಬಿಜಾಪುರಕ್ಕೆ ಸಹಾಯ ಮಾಡುವ ಉದ್ದೇಶವಿದೆಯೇ? ಅಥವಾ ಬೆಂದ ಮನೆಯಲ್ಲಿ ಹಿರಿದು ಲಾಭ ಪಡೆದುಕೊಳ್ಳುತ್ತಿದ್ದಾನೆಯೋ? ಈ ಯುದ್ಧಗಳಿಂದ ಅಂತಿಮವಾಗಿ ಲಾಭವಾಗುತ್ತಿರುವುದು ಯಾರಿಗೆ? ದಖ್ಖನಿನ ಸುಲ್ತಾನರು ಅಳಿಯ ರಾಮರಾಯನ ರಾಜಕೀಯ ಪಗಡೆಯಾಟದಲ್ಲಿ ಕಾಯಿಗಳಾಗಿ ಪರಿಣಮಿಸಿಲ್ಲವೇ? ಈ ಅರಿವು ಮೂಡುತ್ತಲೇ ಅಲಿಯು ಯುದ್ಧ ನಿಲ್ಲಿಸಲು ನಿರ್ಣಯ ತೆಗೆದುಕೊಂಡನು. ಅದರಂತೆ ೧೫೬೩ರ ಜೂನ್ ತಿಂಗಳಲ್ಲಿ ಸೇನೆಗಳು ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿದವು.[೧೦]

ಅಳಿಯ ರಾಮರಾಯನು ವಿಶೇಷವಾಗಿ ಈ ಎರಡನೆಯ ಭಾರಿಯ ಯುದ್ಧದಲ್ಲಿ ಅಲಿ ಆದಿಲ್‌ಷಾಹನಿಗೆ ಸಹಾಯ ಮಾಡುವ ದೃಷ್ಟಿಯಿಂದ ಅಹಮದನಗರದ ಮೇಲೆ ದಾಳಿ ಮಾಡಿದನು. ಈ ಸಮಯದಲ್ಲಿ ಅಳಿಯ ರಾಮರಾಯನ ಸೈನಿಕರು ದೌಲತಾಬಾದ ಹಾಗೂ ಜುನ್ನಾರ ಪ್ರದೇಶಗಳನ್ನು ನಾಶಪಡಿಸಿದ್ದರು[೧೧].

ಅಷ್ಟೇ ಅಲ್ಲದೆ ಅಳಿಯ ರಾಮರಾಯನಿಗೆ ಅಹಂಕಾರ ಭಾವನೆ ಬೆಳೆಯಿತು. ಅವನ ದೊಡ್ಡಸ್ತಿಕೆ ಹಾಗೂ ಪ್ರಾಮಾಣಿಕತೆಯಲ್ಲಿ ಬದಲಾವಣೆಗಳಾಗಿತ್ತು. ಐದು ಷಾಹಿ ಸುಲ್ತಾನರ ಐವರು ರಾಯಭಾರಿಗಳು ಅಳಿಯ ರಾಮರಾಯನ ಆಸ್ಥಾನದಲ್ಲಿ ಯಾವಾಗಲೂ ಇರುತ್ತಿದ್ದರು. ಯುದ್ಧಕ್ಕಿಂತ ಮೊದಲು ಅಳಿಯ ರಾಮರಾಯನು ಅವರೊಂದಿಗೆ ಬಹಳ ಸ್ನೇಹವನ್ನಿಟ್ಟುಕೊಳ್ಳುವುದರ ಮುಖಾಂತರ ಗೌರವದಿಂದ ಕಾಣುತ್ತಿದ್ದನು. ಯುದ್ಧದಲ್ಲಿ ಜಯಿಸಿದ ನಂತರ ಆ ನಡತೆಯನ್ನು ಬಿಟ್ಟು, ಯಾವಾಗಾದರೊಮ್ಮೆ ರಾಯಭಾರಿಗಳಿಗೆ ಆಸ್ಥಾನದಲ್ಲಿ ಬರಲು ಅವಕಾಶ ಮಾಡಿಕೊಡುತ್ತಿದ್ದನು. ಅವರೊಂದಿಗೆ ಕೋಪದಿಂದ ಮತ್ತು ದ್ವೇಷದಿಂದ ಮಾತನಾಡುತ್ತಿದ್ದನು. ಏಕೆಂದರೆ

ತನ್ನನ್ನು ಸೋಲಿಸಲು ಯಾರಿಂದಲೂ ಸಾಧ್ಯವಿಲ್ಲ ಮತ್ತು ದಖ್ಖನಿನಲ್ಲಿ ತನ್ನ ರಾಜ್ಯ ಬಲಿಷ್ಠ ಎಂದು ಅಹಂಕಾರದಿಂದ ವರ್ತಿಸುತ್ತಿದ್ದನು. ಅವನ ವಿದೇಶಾಂಗ ನೀತಿಯಿಂದ ಷಾಹಿ ಸುಲ್ತಾನರಿಗೆ ಮುಖಭಂಗವಾಗಿತ್ತು. ಅಹಮದನಗರದ ಮೇಲಿನ ಯುದ್ಧ ಮುಗಿದ ಬಳಿಕ ವಿಜಯನಗರಕ್ಕೆ ಬಂದ ಅಳಿಯ ರಾಮರಾಯನು, ವೈರಿಗಳ ವಿರುದ್ಧ ಸಹಾಯ ಮಾಡಿದುದಕ್ಕಾಗಿ ತನಗೆ ಅದರ ಪ್ರತಿಫಲವಾಗಿ ಯಾದಗಿರ್ ಮತ್ತು ಬಾಗಲಕೋಟೆ ಜಿಲ್ಲೆಗಳನ್ನು ಕೊಡಬೇಕೆಂದು ಆಲಿ ಆದಿಲ್‌ಷಾಹನಿಗೆ ಒತ್ತಾಯಿಸಿದನು. ಹಾಗೇ ಇಬ್ರಾಹಿಂ ಕುತುಬ್‌ಷಾಹನಿಗೆ ಅವನು ನಿಜಾಮಷಾಹನಿಗೆ ಬೆಂಬಲ ನೀಡಿದ ಅಪರಾಧಕ್ಕಾಗಿ ಕೋವಿಲ್‌ಕೊಂಡ, ಗುಂಟೂರು ಮತ್ತು ಪೆನಗಲ್‌ಗಳನ್ನು ಕೊಡಬೇಕೆಂದು ಆಜ್ಞೆ ಮಾಡಿದನು.[೨] ಈ ಕಡ್ಡಾಯದ ಆದೇಶವನ್ನು ತಿರಸ್ಕರಿಸುವ ಸ್ಥಿತಿಯಲ್ಲಿ ಇಬ್ಬರೂ ಇರಲಿಲ್ಲ. ಅಳಿಯ ರಾಮರಾಯನ ಈ ನೀತಿಯಿಂದ ಷಾಹಿ ಸುಲ್ತಾನರಿಗೆ ಕಣ್ಣು ತೆರೆಯಿತು. ತಮ್ಮ ಅಂತಃಕಲಹಗಳ ಪ್ರಯೋಜನ ಯಾರಿಗೆ ಆಗುತ್ತಿದೆ ಎನ್ನುವುದು ಅವರಿಗೆ ಮನವರಿಕೆಯಾಯಿತು. ಅಳಿಯ ರಾಮರಾಯನ ನೀತಿಯಿಂದ ಎಲ್ಲ ಷಾಹಿ ಸುಲ್ತಾನರು ಒಗ್ಗಟ್ಟಾಗಿ ಅವನ ವಿರುದ್ಧ ನಿಲ್ಲಬೇಕು, ತಮ್ಮ ತಮ್ಮ ನಡುವಿನ ಭಿನ್ನಾಭಿಪ್ರಾಯಗಳನ್ನು ಪರಿಹರಿಸಿಕೊಳ್ಳಬೇಕು. ತಮ್ಮ ಸಮಾನ ವೈರಿಯಾದ ಅಳಿಯ ರಾಮರಾಯನ ರಾಜಕೀಯ ಶಕ್ತಿ ಮತ್ತು ಸೈನ್ಯಶಕ್ತಿಗಳನ್ನು ನಾಶ ಮಾಡಿ ತಮ್ಮ ರಾಜ್ಯ ಹಾಗೂ ತಮ್ಮ ಧರ್ಮ ಉಳಿಸಿಕೊಳ್ಳಬೇಕು ಎಂದು ಯೋಜನೆ ರೂಪಿಸಿದನು. ಅದಕ್ಕೆ ಕಾರಣ ಷಾಹಿ ಸುಲ್ತಾನರ ವ್ಯವಹಾರಗಳಲ್ಲಿ ಅಳಿಯ ರಾಮರಾಯನು ಅತಿಯಾಗಿ ಹಸ್ತಕ್ಷೇಪ ನಡೆಸಿದ್ದು. ಇದು ವಿಜಯನಗರ ಸಾಮ್ರಾಜ್ಯಕ್ಕೆ ಮುಳುವಾಯಿತು.

ಅಹಮದನಗರದ ಹುಸೇನ್ ನಿಜಾಮ ಷಾಹ ಒಕ್ಕೂಟದ ಮುಖ್ಯ ಶಿಲ್ಪಿಯಾದನು. ಅಳಿಯ ರಾಮರಾಯನಿಂದ ಅವನು ಬಹುವಾಗಿ ನೊಂದಿದ್ದನು. ತನ್ನ ನಿಷ್ಠಾವಂತ ಸರದಾರ, ಧೈರ್ಯಶಾಲಿ, ಪರಾಕ್ರಮಿ ಜಹಾಂಗೀರ್‌ಖಾನನನ್ನು ತನ್ನ ಕೈಯಿಂದಲೇ ಅಳಿಯ ರಾಮರಾಯನು ಯಾವ ಕಾರಣವೂ ಇಲ್ಲದೆ ಕೊಲ್ಲಿಸಿದ್ದನು. ತಾನೇ ಖುದ್ದಾಗಿ ಅವನ ಬಳಿಗೆ ಹೋಗಿ ಶಾಂತಿಯನ್ನು ಯಾಚಿಸುವ ಅಪಮಾನಕ್ಕೆ ತನ್ನನ್ನು ಒಳಪಡಿಸಿದ್ದನು. ಆದ್ದರಿಂದ ಒಕ್ಕೂಟವನ್ನು ನಿಜಾಮ ಷಾಹನು ಮುಖ್ಯವಾಗಿ ಆಲೋಚಿಸುವುದು ವಿಹಿತವಾಗಿತ್ತು. ಗುಂಟೂರು, ಕೋವಿಲ್‌ಕೊಂಡ ಮತ್ತು ಪೆನಗಲ್ ಪ್ರದೇಶಗಳನ್ನು ಗೋಲ್ಕೊಂಡದ ಇಬ್ರಾಹಿಂ ಕುತುಬ್ ಷಾಹನು ಹುಸೇನ್ ನಿಜಾಮ ಷಾಹನಿಗೆ ಸಹಾಯ ಮಾಡಿದ್ದಕ್ಕಾಗಿ ಅಳಿಯ ರಾಮರಾಯನಿಗೆ ಯುದ್ಧದ ಪರಿಹಾರದ ರೂಪದಲ್ಲಿ ಕೊಡಬೇಕಾಗಿತ್ತು. ಆದ್ದರಿಂದ ಕುತುಬ್ ಷಾಹನನ್ನು ಒಕ್ಕೂಟಕ್ಕೆ ಸೇರಿಸುವಂತೆ ಒಪ್ಪಿಸುವುದು ಕಷ್ಟವಾಗಲಿಲ್ಲ. ಕೊನೆಯದಾಗಿ ಅಲಿ ಆದಿಲ್‌ಷಾಹನು ಸೇರಿಕೊಂಡನು. ಅಲಿಯು ಮಿಕ್ಕ ಸುಲ್ತಾನರಿಗಿಂತ ರಾಮರಾಯನಿಗೆ ಹೆಚ್ಚು ನಿಕಟವರ್ತಿಯಾಗಿದ್ದುದು ನಿಜ. ಪದೇ ಪದೇ ಅಳಿಯ ರಾಮರಾಯನ ನೆರವನ್ನು ಅವನು ಕೋರಿದನು, ಕೇಳಿದಾಗಲೆಲ್ಲ ಸಹಾಯ ದೊರಕಿತ್ತು. ಆದರೂ ದೋಅಬ್ ತನ್ನ ವಶದಲ್ಲಿ ಉಳಿಸಿಕೊಂಡು ಈಗ ಯಾದಗಿರ್ ಮತ್ತು ಬಾಗಲಕೋಟೆಗಳಿಗಾಗಿ ಒತ್ತಾಯ ಮಾಡುತ್ತಿದ್ದುದು ಅಲಿಯ ಹೃದಯದಲ್ಲಿ ಕಹಿಯನ್ನು ಉಂಟುಮಾಡಿತು. ಇದರ ಜೊತೆಗೆ ಮಧ್ಯಸ್ಥಗಾರನ ಪಾತ್ರ ವಹಿಸಿ ಸುಲ್ತಾನರ ವ್ಯವಹಾರಗಳಲ್ಲಿ ನಿರಂಕುಶವಾಗಿ ಅವನು ನಡೆದುಕೊಳ್ಳುತ್ತಿದ್ದ ರೀತಿಯು ಬಿಜಾಪುರದ ಸುಲ್ತಾನನ ಗಮನಕ್ಕೆ ಬರದೆ ಹೋಗಲಿಲ್ಲ. ಮೂವರಲ್ಲೂ ಸಹನೆಯ ಬಟ್ಟಲು ತುಂಬಿ ಬಂದಿತ್ತು. ಒಟ್ಟು ಸೇರಿ ಏನಾದರೂ ಕ್ರಮ ಕೈಗೊಳ್ಳಲು ಅವರು ಹಿಂಜರಿಯಲಿಲ್ಲ.

ಮೊದಲು ಈ ಒಕ್ಕೂಟದ ವಿಚಾರವನ್ನು ನಿಜಾಮ ಷಾಹನು ಮಂಡಿಸಿದಾಗ, ಇಬ್ರಾಹಿಂ ಕುತುಬಷಾಹನು ತಕ್ಷಣವೇ ಒಪ್ಪಿಕೊಂಡನು. ವ್ಯವಹಾರವನ್ನು ಪೂರೈಸಲು ಮುಸ್ತಫ್‌ಖಾನನನ್ನು ಕಳುಹಿಸಿದನು. ಅಹಮದನಗರದಿಂದ ಮುಸ್ತಫಾ ಬಿಜಾಪುರಕ್ಕೆ ಹೋದನು. ಹುಸೇನ್ ನಿಜಾಮಷಾಹನು ಅವಳಿ ವಿವಾಹಗಳ ಸೂಚನೆಯನ್ನು ಮುಂದಿಟ್ಟನು. ಹುಸೇನ್ ನಿಜಾಮ ಷಾಹನ ಮಗಳು ಚಾಂದ್‌ಬೀಬಿಯನ್ನು ಅಲಿ ಆದಿಲ್‌ಷಾಹ ಮದುವೆಯಾಗುವುದು ಹಾಗೂ ಅಲಿಯ ತಂಗಿ ಬೀಬಿಹದಿಯಾ ಸುಲ್ತಾನಳನ್ನು ಹುಸೇನನ ಮಗ ಮುರ್ತುಜಾ ಮದುವೆಯಾಗುವುದು ಎಂಬುದಾಗಿ ನಿರ್ಧರಿಸಲಾಯಿತು. ನಂತರ ಬಿದಾರದ ಅಲಿ ಬರೀದ್‌ಷಾಹನನ್ನು ಒಕ್ಕೂಟಕ್ಕೆ ಸೇರಿಸಿಕೊಳ್ಳಲಾಯಿತು. ಹಾಗಾಗಿ ಅದು ಹುಸೇನ್, ಇಬ್ರಾಹಿಂ, ಅಲಿ ಮತ್ತು ಬರೀದ್ ಈ ನಾಲ್ವರು ಸುಲ್ತಾನರ ಪ್ರಬಲವಾದ ಒಕ್ಕೂಟವಾಯಿತು. ಈ ಒಕ್ಕೂಟಕ್ಕಾಗಿಯೇ ಹುಸೇನ್ ನಿಜಾಮ ಷಾಹಿ ಮತ್ತು ಅಲಿ ಆದಿಲ್‌ಷಾಹಿ ರಾಜ್ಯಗಳ ನಡುವೆ ವೈವಾಹಿಕ ಸಂಬಂಧ ಬೆಳೆದದ್ದು.

### ೩.೨.೧. ಅಲಿ ಆದಿಲ್ ಷಾಹ್‌ನ ಜೊತೆ ಚಾಂದ್‌ಬೀಬಿಯ ವಿವಾಹ (೧೫೬೪)

ಅಹಮದನಗರದ ಹುಸೇನ್ ನಿಜಾಮ ಷಾಹನ ಮಗಳು ಚಾಂದ್‌ಬೀಬಿಯನ್ನು ಬಿಜಾಪುರದ ಅಲಿ ಆದಿಲ್‌ಷಾಹನಿಗೂ ಹಾಗೂ ಅಲಿ ಆದಿಲ್‌ಷಾಹನ ತಂಗಿ ಬೀಬಿಹದಿಯಾ ಸುಲ್ತಾಳನ್ನು ಹುಸೇನ್ ನಿಜಾಮ ಷಾಹನ ಮಗ ಮುರ್ತುಜಾನಿಗೂ ವಿವಾಹ ಮಾಡುವ ಕರಾರು ಮಾಡಿಕೊಂಡರು. ಅದರ ಪ್ರಕಾರ ಎರಡು ಕಡೆಗಳಲ್ಲೂ ಸಂತೋಷ, ಆನಂದದಿಂದ ಮದುವೆಯ ಸಿದ್ಧತೆಯನ್ನು ಮಾಡತೊಡಗಿದರು (ಈ ಮದುವೆಯ ವೈಭವದ ವರ್ಣನೆಯನ್ನು "ಮೆಮೋಯರ್ಸ್ ಆಫ್ ಚಾಂದ್‌ಬೀಬಿ" ಕೃತಿಯಲ್ಲಿ ಈ ರೀತಿಯಾಗಿ ವರ್ಣಿಸುತ್ತದೆ). "ಒಂದೇ ದಿನದಂದು ಬಿಜಾಪುರ ಮತ್ತು ಅಹಮದನಗರ ರಾಜಧಾನಿ ನಗರಗಳನ್ನು ಶೃಂಗರಿಸಿ ಸಿದ್ಧ ಮಾಡಿದರು. ಎರಡೂ ನಗರಗಳ ಬಾಗಿಲು ಗೋಡೆಗಳು, ರಸ್ತೆಗಳು, ಬಾಜಾರುಗಳು ಇಂದ್ರಭವನದ ಹಾಗೆ ಮಾರ್ಪಟ್ಟವು. ಪ್ರತಿಯೊಬ್ಬ ಸಣ್ಣ, ದೊಡ್ಡ ವ್ಯಕ್ತಿಯು, ತರುಣರು, ವೃದ್ಧರು, ಅಲ್ಲಿಯವರು, ಇಲ್ಲಿಯವರು ಸಂತೋಷಪಟ್ಟು ಮದುವೆಯ ಸಮಾರಂಭವಾದ್ದರಿಂದ ತಂತಮ್ಮ ಭಂಡಾರದ ಮತ್ತು ಬಟ್ಟೆ ಬರೆಗಳ ಉಗ್ರಾಣದ ಬೀಗವನ್ನು ತೆರೆದರು. ಆಭರಣಗಳನ್ನು ಎಲ್ಲರಿಗೂ ಎದ್ದು ಕಾಣುವಂತೆ ಮೈ ಮೇಲೆ ಹಾಕಿಕೊಂಡರು. ಪ್ರತಿಯೊಂದು ಓಣಿಯಲ್ಲೂ, ರಸ್ತೆಯಲ್ಲೂ ಮದುವೆಯ ಗಲಿಬಿಲಿ ಮತ್ತು ಸಂತೋಷದ ಧ್ವನಿಯು ಆಕಾಶವನ್ನು ಮುಟ್ಟಿತು. ನೃತ್ಯಾಂಗನೆಯರು, ಕಲಾವಂತಿಣಿಯರು, ಸುಸ್ವರ ವಾದ್ಯದವರು ಅಲ್ಲಲ್ಲಿ ಮತ್ತು ಮನೆಮನೆಗಳಲ್ಲಿ ನಿಂತು ನೃತ್ಯ ಮಾಡಿದರು. ಸುಸ್ವರ ಹಾಡುಗಳನ್ನು ಹಾಡುವವರು, ಗಾಯಕರು ಪ್ರತಿಯೊಂದು ವಾಡೆಗಳಲ್ಲಿ ಮಹಡಿಯ ಮೇಲೆ ಕುಳಿತು ಗಾಯನ ಮಾಡುತ್ತ ಮನೋರಂಜನೆ ನೀಡಿದರು. ಅವರ ಗಾಯನ ಎಷ್ಟೊಂದು ಪರಿಣಾಮಕಾರಿ ಯಾಗಿತ್ತೆಂದರೆ, ಅವರು ಹಾಡುವ ಸಮಯದಲ್ಲಿ ಹರಿಯುವ ನೀರು, ಹಾರುವ ಹಕ್ಕಿಗಳ ಗತಿ ಸ್ತಬ್ಧವಾಗಿರುತ್ತಿತ್ತು. ಖಾಸಾ ಸಮಾರಂಭಗಳಲ್ಲಿ ಮತ್ತು ಶ್ರೇಷ್ಠ ಸಭೆಗಳಲ್ಲಿ ಹಾಸಿಗೆಯ ಮೇಲೆ ಮುತ್ತು ರತ್ನಗಳನ್ನು ಚೆಲ್ಲುತ್ತಿದ್ದರು. ಪ್ರತಿಯೊಬ್ಬ ಖಾಸಾ ಜನರು ಮತ್ತು ಉಳಿದವರು ಇಂಥ ಸಭೆಗಳಲ್ಲಿ ಮುತ್ತು ರತ್ನಗಳನ್ನು ಚೆಲ್ಲುತ್ತಿದ್ದರು. ಅದರ ವಿವರ ವರ್ಣನೆಯನ್ನು ಎಷ್ಟೊಂದು ಬರೆಯಬೇಕು? ಯಾಕೆಂದರೆ ಸಭೆಯ ಅಲಂಕಾರದ ಶೋಭೆಯ

ಸವಿಸ್ತಾರವನ್ನು ವರ್ಣಿಸಲು ಲೇಖನಿಗೆ ದಣಿವಾಗುತ್ತಿದೆ, ಅದು ನಿಲ್ಲುತ್ತದೆ. ಅತ್ಯಂತ ವೈಭವದ ಭಾರೀ ಮದುವೆಯ ಸಮಾರಂಭ ನಡೆಯಿತ್ತು.

ಕ್ರಿ.ಶ. ೧೫೬೪ರಲ್ಲಿ ಅಲಿ ಆದಿಲ್‌ಷಾಹನ ಜೊತೆಗೆ ಚಾಂದ್‌ಬೀಬಿಯ ವಿವಾಹವು ವೈಭವೋಪೇತವಾಗಿ ನಡೆಯಿತು. ಈ ರಾಜ್ಯಗಳ ಮಧ್ಯಮುಖವಾಗಿ ವಿವಾಹವಾಗಿದ್ದ ಪ್ರದೇಶ ಶೋಲಾಪುರವನ್ನು ವಿವಾಹದ ಸಂದರ್ಭದಲ್ಲಿ ವರನಿಗೆ ವರದಕ್ಷಿಣೆಯಾಗಿ ಕೊಡಲಾಯಿತು. ಇನ್ನೊಂದು ಕಡೆ ಅಲಿ ಆದಿಲ್‌ಷಾಹನ ತಂಗಿ ಬೀಬಿಹದಿಯಾ ಸುಲ್ತಾನಳ ಜೊತೆಗೆ ಮುರ್ತುಜಾನ ಮದುವೆ ನಡೆಸಲಾಯಿತು. ಈ ಮದುವೆಯ ಸಮಾರಂಭಗಳು ಸಭೆ-ಸಂತೋಷ ಕೂಟಗಳು ಮೂರು ತಿಂಗಳ ಪರ್ಯಂತ ನಿರಂತರವಾಗಿ ವೈಭವೋಪೇತವಾಗಿ ನಡೆದವು. ಮದುವೆಯ ಸಮಾರಂಭವಾದ ನಂತರ ಉಭಯ ವಧುವರರನ್ನು ಅಲ್ಲಿಂದಿಲ್ಲಿಗೆ-ಇಲ್ಲಿಂದಲ್ಲಿಗೆ ಕಳುಹಿಸಿಕೊಟ್ಟರು. ಚಾಂದ್‌ಬೀಬಿ ವಧುವು ಸುದೈವಿಯಾಗಿ ಅಲಿ ಆದಿಲ್‌ಷಾಹನ ಹೆಂಡತಿಯಾಗಿ, ರಾಣಿಯಾಗಿ ಬಿಜಾಪುರ ನಗರದ ಅಧಿಕಾರಿಣಿಯಾದಳು.

### ೩.೩. ಬಿಜಾಪುರದಲ್ಲಿ ಅಧಿಕಾರ

ಬಿಜಾಪುರದ ಆದಿಲ್‌ಷಾಹಿ ಸುಲ್ತಾನರುಗಳಲ್ಲಿ ಚಾಂದ್‌ಬೀಬಿಯು ಪ್ರಮುಖಳಾಗಿ ಕಂಡುಬರುತ್ತಾಳೆ. ಅವಳ ಸಾಧನೆಗಳು ಬಿಜಾಪುರದ ಜನತೆ ಮರೆಯುವಂತಿರಲಿಲ್ಲ. ಚಾಂದ್‌ಬೀಬಿಯು ಮದುವೆಯ ನಂತರ ತನ್ನ ಗಂಡನ ಜೊತೆಗೆ ಆಡಳಿತದ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದಳು. ಅಲಿ ಆದಿಲ್‌ಷಾಹನು ವೈರಿಗಳ ಜೊತೆಗೆ ಯುದ್ಧದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ, ಚಾಂದ್‌ಬೀಬಿಯು ತಮ್ಮ ರಾಜಧಾನಿಯಲ್ಲಿ ಸುಲ್ತಾನನ ಪರವಾಗಿ ಆಡಳಿತವನ್ನು ಸುವ್ಯವಸ್ಥೆಯಿಂದ ನಡೆಸಿಕೊಂಡು ಹೋಗುತ್ತಿದ್ದಳು. ಅಷ್ಟೇ ಅಲ್ಲದೇ ಚಾಂದ್‌ಬೀಬಿಯು 'ಹುಕ್ಕೇರಿ' ಯುದ್ಧದಲ್ಲಿ ಅಲಿ ಆದಿಲ್‌ಷಹನ ಜೊತೆಗೆ ಸೇರಿ ಅರಸ ರಾಮರಾಜನನ್ನು ಸೋಲಿಸಿ ಕೊಲೆಗೈದಳು. ಈ ಯುದ್ಧದ ಗೆಲುವಿನ ರೂವಾರಿ ಚಾಂದ್‌ಬೀಬಿಯೇ ಆಗಿದ್ದಳು. ನಂತರ ಗೆದ್ದಂತಹ ಪ್ರದೇಶಗಳೊಂದಿಗೆ ಒಪ್ಪಂದ ಮಾಡಿಕೊಂಡು ಅದು ಇಬ್ಭಾಗವಾಗುವವರೆಗೂ, ಚಾಂದ್‌ಬೀಬಿಯು ತನ್ನ ಸ್ವಸಾಮರ್ಥ್ಯದಿಂದ ಸಾಮ್ರಾಜ್ಯದ ರಕ್ಷಣೆಯ ಹೊಣೆ ಹೊತ್ತಳು. ಇದರಿಂದ ಅವಳ ಹೆಸರು ಬಿಜಾಪುರದ ಇತಿಹಾಸದಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆಯಿತು.

### ೩.೩.೧. ಅಲಿ ಆದಿಲ್ ಷಾಹನ ಮರಣ (೧೫೮೦)

ಅಲಿ ಆದಿಲ್‌ಷಾಹನ ತಂಗಿ 'ತಾನಿ ಬೀಬಿ ಸುಲ್ತಾನಾಳನ್ನು' ಅಲಿ ಬರೀದಿನಿಗೆ ಕೊಟ್ಟು ಮದುವೆ ಮಾಡಿದ್ದರು. ಅವಳು ಮಕ್ಕಳಿಲ್ಲದೆ ಸತ್ತಳು. ಅವಳ ಆಪದ್ಧನ (ಆಪತ್ತಿನ ಕಾಲಕ್ಕೆ ಒದಗಲೆಂದು ಕೂಡಿಡುವ ಧನ) ಹಾಗೂ ಅನೇಕ ಆಭರಣಗಳು ಅಲಿ ಬರೀದನ ಮನೆಯಲ್ಲೇ ಉಳಿದವು. ತಂಗಿಯ ಕೊನೆಯ ನೆನಪಿನ ವಸ್ತುಗಳನ್ನು ಕೊಡಬೇಕೆಂದು ಅಲಿ ಬರೀದನಿಗೆ ಹೇಳಿದನು. ಆ ವಸ್ತುಗಳನ್ನು ಪಡೆಯುವ ಹಕ್ಕು ಅವನಿಗಿತ್ತು. ಹೇಗೆಂದರೆ ಕುರಾನ ಶರೀಫದಲ್ಲಿ ಈ ರೀತಿ ಹೇಳಲಾಗಿದೆ,

''ಮೊದಲನೆಯದು, ಸ್ತ್ರೀಯಾಗಲಿ ಅಥವಾ ಪುರುಷನಾಗಲಿ ಸತ್ತರೆ ಅವರ ಆಸ್ತಿಯನ್ನು ಅವರ ತಂದೆ-ತಾಯಿಗಳಿಗೆ ಮರಳಿ ಕೊಡಬೇಕು. ಎರಡನೆಯದು, ಆ ಗ್ರಾಮದಲ್ಲಿಯೇ ಒಳ್ಳೆಯ ನಡತೆಯ ಮನುಷ್ಯನು ಸಾಲದಿಂದ ಪೀಡಿತನಾಗಿ, ಆತನ ಮನೆ ಮಾರುಗಳು ಹರಾಜು ಆಗುವ ಪ್ರಸಂಗವಿದ್ದರೆ, ಆತನಿಗೆ ಸತ್ತವರ ಸಂಪತ್ತು ಇತ್ಯಾದಿಗಳನ್ನು ಕೊಟ್ಟು ಸಂಕಟದಿಂದ ಮುಕ್ತ ಮಾಡಬೇಕು. ಮೂರನೆಯದು, ಸತ್ತವನ ಗ್ರಾಮದಲ್ಲಿಯ ನದಿ-ಹಳ್ಳಗಳಿಗೆ ಅಡ್ಡಲಾಗಿ ಕಟ್ಟಿರುವ ಸೇತುವೆಯು ಬಿದ್ದು ಸಂಪರ್ಕ ಕಡಿದುಹೋಗಿದ್ದರೆ ಅದನ್ನು ಸತ್ತವನ ಸಂಪತ್ತನ್ನು ಖರ್ಚು ಮಾಡಿ ಆ ಸೇತುವೆಯನ್ನು ದುರಸ್ತಿ ಮಾಡಿ ಮಾರ್ಗವನ್ನು ಉಪಯೋಗಕ್ಕೆ ತರಬೇಕು. ಇಲ್ಲದೆ ಮಸೀದಿ ಇತ್ಯಾದಿ ಪ್ರಸಿದ್ಧ ಸ್ಥಳಗಳ ಕಟ್ಟಡಗಳು ಬಿದ್ದಿದ್ದರೆ, ಅವುಗಳನ್ನು ದುರಸ್ತಿ ಮಾಡಿ ಸರಿ ಮಾಡಬೇಕು ಅಥವಾ ಆತನ ಸಂಪತ್ತನ್ನು ಖರ್ಚು ಮಾಡಿ ಹೊಸದಾಗಿ ಕಟ್ಟಿಸಬೇಕು. ನಾಲ್ಕನೆಯ ಪರ್ಯಾಯವೆಂದರೆ, ಸಾಯುವ ಮುನ್ನ ಸ್ತ್ರೀಯಾಗಲಿ, ಪುರುಷನಾಗಲಿ, ಯಾರಿಗೆ ಕೊಡಬೇಕು ಅಥವಾ ಹೇಗೆ ವಿತರಿಸಬೇಕು ಎಂದು ಹೇಳಿರುತ್ತಾರೋ ಅಥವಾ ಬರೆದು ಇಟ್ಟಿರುತ್ತಾರೋ ಆ ರೀತಿಯಾಗಿ ಮೃತ್ಯುಲೇಖದಂತೆ ಕಾರ್ಯ ಮಾಡಬೇಕು''.[೧೮]

ಹೀಗೆ ಕುರಾನಿನ ಶಾಸ್ತ್ರಗಳ ಪ್ರಕಾರ ತನ್ನ ತಂಗಿಯ ಸಂಪತ್ತು ಆಭರಣ ಮೊದಲಾದವುಗಳನ್ನು ತರಲು ಒಬ್ಬ ವಕೀಲನನ್ನು ನೇಮಿಸಿ, ಅಲಿ ಆದಿಲ್‌ಷಾಹನು ಅಲಿಬರೀದನ ಹತ್ತಿರ ಕಳುಹಿಸಿದ್ದನು. ಆಗ ಅಲಿ ಬರೀದನು ಅವಳ ಜಡಜವಾಹಿರಗಳನ್ನು ಕೊಡದೆ ಉಳಿದ ಎಲ್ಲ ವಸ್ತುಗಳನ್ನು ತಿರುಗಿ ಕೊಟ್ಟನು. ಅವಳ ಆಭರಣಗಳು ಹಾಗೆಯೇ ಉಳಿದವು. ಹಿಜಿರಾ ಶಕ ೯೮೮ರಲ್ಲಿ (ಕ್ರಿ.ಶ. ೧೫೮೦) ಕಾಮಿಲಖಾನನು ಈ ವಿಷಯವನ್ನು ಆದಿಲ್‌ಷಾಹನಿಗೆ ನೆನಪಿಸಿದನು[೧೯]. ತನ್ನ ಹಾಗೂ ಅಲಿಬರೀದನ ಸ್ನೇಹವಿದೆ, ತಮ್ಮ ಅಪ್ಪಣೆಯಾದರೆ ನಾನು ಯಾರನ್ನಾದರೂ ಅಲ್ಲಿಗೆ ಕಳಿಸಿ ತಮ್ಮ ತಂಗಿಯ ಉಳಿದ ಆಭರಣಗಳನ್ನು ತಿರುಗಿ ತರಿಸಿಕೊಳ್ಳುವೆ ಎಂದನು. ಅದಕ್ಕೆ ಆದಿಲ್‌ಷಾಹನು, ಅಲಿಬರೀದನ ಕಡೆಯಿಂದ ನಮಗೆ ಬರಬೇಕಾದ ವಸ್ತುಗಳು ಕುರಾನ ಷರೀಫ ಶಾಸ್ತ್ರದ ಪ್ರಕಾರ ಬರಬೇಕು ಎಂದನು. ಆ ಮಾತನ್ನು ಕೇಳಿದ ಕಾಮಿಲಖಾನನು ಬಾದಷಾಹನಿಂದ ಅನುಮತಿ ದೊರೆಯಿತೆಂದು, ತಿಳಿದು 'ಅಲಿ ಅಕಾ ಸರಖೇಲ' ಎಂಬ ವ್ಯಕ್ತಿಯನ್ನು ಕರೆದು ಆದಿಲ್‌ಷಾಹನ ಹತ್ತಿರ ತಂದು ಆತನಿಗೆ ವಕೀಲಿಯ ಕೆಲಸವನ್ನು ಕೊಟ್ಟು ಬೀದರ್‌ಗೆ ಕಳಿಸಿದನು. ನಾಲ್ಕು ತಿಂಗಳುಗಳ ನಂತರ ಅಲಿ ಆಖಾನು ತಿರುಗಿ ಬಂದನು. ಅವನ ತಂಗಿಯ ಆಭರಣಗಳಲ್ಲಿಯ ಕೆಲವು ಆಭರಣಗಳು ಹಾಗೂ ತಂಗಿಯ ಸೇವೆಯಲ್ಲಿದ್ದ ಇಬ್ಬರು ನಪುಂಸಕ ಸೇವಕರನ್ನು ಕರೆದುಕೊಂಡು ಬಂದು ಒಪ್ಪಿಸಿದನು.

ಆ ಇಬ್ಬರು ಸೇವಕರಲ್ಲಿ ಒಬ್ಬನನ್ನು ಆಲಿ ಆದಿಲ್‌ಷಾಹನು ರಾತ್ರಿಯಲ್ಲಿ ತನ್ನ ತಂಗಿಯ ಆಭರಣಗಳು ಕುರಿತು ಶೋಧಿಸಲು ಕರೆದನು. ಆ ನಪುಂಸಕ ಸೇವಕನು ಬಾದಷಹನ ಸನ್ನಿಧಿಯಲ್ಲಿ ಬಂದನು. ಬಾದಷಹನ ಹತ್ತಿರ ಆತನ ಅಂಗರಕ್ಷಕರು ಪ್ರತ್ಯಕ್ಷವಾಗಿ ಇದ್ದಾಗಲೂ ಒಮ್ಮೆಲೇ ಬಾದಷಹನ ಎದೆಗೆ ಕತ್ತಿಯಿಂದ ಹೊಡೆದನು. ಆ ಕತ್ತಿ ಬಾದಷಹನ ಎದೆ ಸೀಳಿ ಬೆನ್ನ ಹಿಂದೆ ಬಂದಿತ್ತು. ಬಾದಷಹನು ಆ ಸ್ಥಳದಿಂದ ಎದ್ದು ಗಾಯಾಳುವಾಗಿ ಅಂಗಳದಲ್ಲಿ ಬಂದು ಪ್ರಾಣ ಬಿಟ್ಟನು. ಹತ್ತಿರ ಇದ್ದ ಜನರು ಕೂಗಹತ್ತಿದರು. ಬಾದಷಹನನ್ನು ಕೊಂದ ನಪುಂಸಕನು ಅಲ್ಲಿಯೇ ಒಂದು ಏಕಾಂತ ಸ್ಥಳದಲ್ಲಿ ನಿಂತಿದ್ದನು. ಒಬ್ಬ ಗೃಹಸ್ಥನು ಅವನನ್ನು ಹಿಡಿದು ಕೊಲ್ಲಬೇಕೆಂದು

ಮುಂದೆ ಬರುವಷ್ಟರಲ್ಲಿ ನಪುಂಸಕನು ಒಂದು ಕೋಣೆಯಲ್ಲಿ ಜಿಗಿದು ಬಾಗಿಲು ಮುಚ್ಚಿಕೊಂಡು ಬಿಟ್ಟನು. ಮರುದಿನ ಆ ನಪುಂಸಕನನ್ನು ಕೊಲ್ಲಲಾಯಿತು. ಇನ್ನೊಬ್ಬ ನಪುಂಸಕನನ್ನು ಬಾದಷಹನನ ನೌಕರರು ಹಿಡಿದು ಅದೇ ದಿನ ಕೊಲೆ ಮಾಡಿದರು.

ಬಿಜಾಪುರದಲ್ಲಿನ ಕಾಮದಾರ ಕಛೇರಿಯ ಎಲ್ಲ ಜನರು, ವಿದ್ವಾಂಸರು, ಗುಣವಂತರು ಹೀಗೆ ನಗರದಲ್ಲಿಯ ಎಲ್ಲ ಜನರ ಸಮ್ಮುಖದಲ್ಲಿ ಅಲಿ ಆದಿಲ್‌ಷಾಹನ ಶವಕ್ಕೆ ಸ್ನಾನ ಮಾಡಿಸಿ, ಕಫನ ಮಾಡಿ, ಅಂದರೆ ಪ್ರೇತದ ಮೇಲೆ ವಸ್ತುಗಳನ್ನು ಹೊದಿಸಿ ಆತನ ಶವವನ್ನು ತಂದೆಯ ಶವಪೆಟ್ಟಿಗೆಯಲ್ಲಿಟ್ಟು ನಗರದ ಪ್ರಸಿದ್ಧ ಸ್ಥಳದಲ್ಲಿ ಶನಿವಾರ ದಿನಾಂಕ ೨೪, ತಿಂಗಳು ಸಫರ, ಹಿಜಿರಾ ಶಕ ೯೮೮ರಂದು (೯, ಏಪ್ರಿಲ್ ೧೫೮೦) ಅಲಿ ಆದಿಲ್‌ಷಾಹನನ್ನು ಭೂಮಿಯಲ್ಲಿ ದಫನ ಮಾಡಿದರು.[೧೫]

### ೩.೩.೨. ಚಾಂದ್‌ಬೀಬಿಯ ಮೇಲೆ ಪ್ರಭಾವ ಬೀರಿದ ಅಂಶ

ಮಧ್ಯಕಾಲೀನ ಭಾರತದ ಸಂದರ್ಭದಲ್ಲಿ ಚಾಂದ್‌ಬೀಬಿಯು ವೈರಿಗಳಿಗೆ ಸಿಂಹಸ್ವಪ್ನವಾಗಿದ್ದಳು. ಇವಳು ಬಿಜಾಪುರ ಮತ್ತು ಅಹಮದನಗರ ಈ ಎರಡೂ ರಾಜ್ಯಗಳಲ್ಲಿ ಆಳ್ವಿಕೆ ನಡೆಸಿದಳು. ಚಾಂದ್‌ಬೀಬಿಯು ಈ ಎತ್ತರಕ್ಕೆ ಬೆಳೆಯಲು ಅವಳ ತಾಯಿ ಖೂನ್‌ಜಾ ಹುಮಾಯೂನ್‌ಳ ಪ್ರೇರಣೆಯಿಂದಲೇ ಸಾಧ್ಯವಾಯಿತು. ಅವಳ ತಾಯಿಯ ಸಾಧನೆಗಳು ಚಾಂದ್‌ಬೀಬಿಯ ಮೇಲೆ ಪ್ರಭಾವ ಬೀರಿದವು.

ಖೂನ್‌ಜಾ ಹುಮಾಯೂನ್‌ಳು ದಕ್ಷಿಣ ಭಾರತದ ವೀರ ಮಹಿಳೆಯರಲ್ಲಿ ಒಬ್ಬಳು. ಅವಳ ಆಡಳಿತಾತ್ಮಕ ನೀತಿಗಳು ತನ್ನ ಸಮಕಾಲೀನ ಜನರ ಮೇಲೆ ಪ್ರಭಾವ ಬೀರಿದವು. ಖೂನ್‌ಜಾ ಹುಮಾಯೂನ್‌ಳ ಗಂಡ ಹಸನ್ ನಿಜಮಾ ಷಾಹನು ೧೫೬೫ರಲ್ಲಿ ಮರಣ ಹೊಂದಿದನು.[೧೬] ಅನಂತರ ಅಪ್ರಾಪ್ತ ವಯಸ್ಕನಾಗಿದ್ದ ಅವನ ಮಗ ಒಂದನೆಯ ಮುರ್ತಜಾ ನಿಜಾಮ ಷಾಹ ಸಿಂಹಾಸನವನ್ನೇರಿದನು. ಮುರ್ತಜಾ ಇನ್ನೂ ಅಪ್ರಾಪ್ತ ವಯಸ್ಕನಾಗಿದ್ದ ಕಾರಣ ಅವನ ತಾಯಿ, ಖೂನ್‌ಜಾ ಹುಮಾಯೂನ್ ಸುಲ್ತಾನನ ರಾಜಪ್ರತಿನಿಧಿಯಾಗಿ ರಾಜ್ಯದ ಉಸ್ತುವಾರಿಯನ್ನು ಅನೇಕ ವರ್ಷಗಳವರೆಗೆ ಮಂತ್ರಿಯಾಗಿ ಆಳ್ವಿಕೆ ಮಾಡಿದಳು. ಇನಾಯತುಲ್ಲಾ ಮತ್ತು ಖಾಸಿಂಬೇಗ್‌ರು ರಾಜಮಾತೆಯ ಅಪ್ಪಣೆ ಪಡೆದು ಸಾಮ್ರಾಜ್ಯದ ಆಡಳಿತದ ಜವಾಬ್ದಾರಿ ನೋಡಿಕೊಳ್ಳುತ್ತಿದ್ದರು. ಈ ರೀತಿಯಾಗಿ ಖೂನ್‌ಜಾ ಹುಮಾಯೂನ್ ಸುಲ್ತಾನಳು ಒಬ್ಬ ಸ್ತ್ರೀ ಆಗಿ ಅಹಮದನಗರವನ್ನು ಸ್ವತಂತ್ರವಾಗಿ ಆಡಳಿತ ನಡೆಸಿದಳು. ಅವಳ ಕಾಲದಲ್ಲಿ ಅಹಮದನಗರದ ಇತಿಹಾಸವೇ ಬದಲಾಯಿಸಿಬಿಟ್ಟಿತು. ಅವಳ ಸುಧಾರಣೆಗಳು, ಆಡಳಿತ ವಿಧಾನಗಳು ಮತ್ತು ಅವಳ ಪ್ರಜಾಹಿತ ಕಾರ್ಯಗಳು ಇತರ ಸುಲ್ತಾನರಿಗೆ ಮಾದರಿಯಾಗಿತ್ತು. ಅವಳ ಆಡಳಿತ ಅವಧಿಯಲ್ಲಿ ಅಹಮದನಗರ ರಾಜ್ಯವು ಬಲಿಷ್ಠ ರಾಜ್ಯವಾಗಿ ಬೆಳೆಯಿತು. ಖೂನ್‌ಜಾ ಹುಮಾಯೂನಳ ಸಾಧನೆಗಳು ಅವಳ ಮಗಳು ಚಾಂದ್‌ಬೀಬಿಯ ಮೇಲೆ ಪ್ರಭಾವ ಬೀರಿತು. ಮುಂದೆ ಚಾಂದ್‌ಬೀಬಿಯು ಕೂಡ ಬಿಜಾಪುರದಲ್ಲಿ ಅಧಿಕಾರ ಸ್ಥಾಪಿಸುವ ಮೂಲಕ ತನ್ನ ಸಾಮರ್ಥ್ಯವನ್ನು ಮೆರೆದಳು.

### ೩.೩.೩. ಬಿಜಾಪುರದಲ್ಲಿ ಅಧಿಕಾರ ಪಡೆದ ಬಗೆ

ಚಾಂದ್‌ಬೀಬಿಯು ಬಿಜಾಪುರದಲ್ಲಿ ಅಧಿಕಾರ ಪಡೆಯುವ ಪೂರ್ವದಲ್ಲಿ ಅವಳ ಗಂಡ ಒಂದನೇ ಅಲಿ ಆದಿಲ್‌ಷಾಹ ಅಲ್ಲಿ ಆಳ್ವಿಕೆ ನಡೆಸುತ್ತಿದ್ದನು. ಅವನ ಆಳ್ವಿಕೆಯ ಸಮಯದಲ್ಲಿ ಬಿಜಾಪುರ ರಾಜ್ಯವು ಶಾಂತಿಗೆ

ಹೆಸರುವಾಸಿಯಾಗಿತ್ತು. ಒಂದನೇ ಅಲಿ ಆದಿಲ್‌ಷಾಹನು ಕೂಡ ಹಿಂದೆ ಆಳ್ವಿಕೆ ಮಾಡಿದ ಬಹಮನಿ ಸುಲ್ತಾನರ ಆಡಳಿತವನ್ನೇ ಮುಂದುವರಿಸಿಕೊಂಡು ಬಂದಿದ್ದನು. ಅವನ ಆಡಳಿತವು ಮೂರು ಅಂತಸ್ತುಗಳಿಂದ ಕೂಡಿತ್ತು. ಅವುಗಳೆಂದರೆ:

೧. ಕೇಂದ್ರ ಆಡಳಿತ

೨. ಪ್ರಾಂತೀಯ ಆಡಳಿತ

೩. ಗ್ರಾಮ ಆಡಳಿತ

ಆದರೆ ಅವುಗಳ ಹೊಣೆ ಹೊತ್ತಿದ್ದ ವ್ಯಕ್ತಿಗಳು ಮಾತ್ರ ಕಾಲದಿಂದ ಕಾಲಕ್ಕೆ ಬದಲಾಗುತ್ತಿದ್ದರು.[೬]

ಒಂದನೆಯ ಅಲಿ ಆದಿಲ್‌ಷಾಹನ ಕಾಲಾವಧಿಯಲ್ಲಿ ಬಿಜಾಪುರ ರಾಜ್ಯ ವಿಶಾಲವಾಗಿ ಹರಡಿತ್ತು. ಆ ವಿಶಾಲವಾದ ರಾಜ್ಯದ ಆಡಳಿತ ಬಹು ಗಂಭೀರವಾದ ವಿಷಯವೇ ಆಗಿತ್ತು. ಏಕೆಂದರೆ ಅಲಿ ಆದಿಲ್‌ಷಾಹ ತನ್ನ ಅಮೂಲ್ಯವಾದ ಸಮಯವನ್ನು ಯುದ್ಧದಲ್ಲಿಯೇ ಕಳೆಯುತ್ತಿದ್ದನು. ಅದಕ್ಕಾಗಿಯೇ ವಿಶಾಲವಾದ ರಾಜ್ಯದ ಆಡಳಿತವು ಒಬ್ಬನಿಂದಲೇ ನಡೆಸಿಕೊಂಡು ಹೋಗಲು ಸಾಧ್ಯವಿಲ್ಲ ಎಂದು ಗಮನಿಸಿ ತನ್ನ ಸಹಾಯಕ್ಕಾಗಿ ಮಂತ್ರಿಮಂಡಲವನ್ನು ನೇಮಿಸಿದನು. ತನ್ನ ರಾಜ್ಯದ ರಕ್ಷಣೆಗಾಗಿ ಸೈನಿಕ ಪಡೆಯೊಂದನ್ನು ಸಜ್ಜುಗೊಳಿಸಿದನು. ವಿವಿಧ ನಾಗರಿಕ ವಿಭಾಗಗಳ ಹೊಣೆ ಹೊತ್ತ ಆಡಳಿತಶಾಹಿಯಿದ್ದಿತು. ಕೇಂದ್ರದ ಈ ಮಾದರಿಯಲ್ಲೇ ಪ್ರಾಂತಮಟ್ಟದ ಆಡಳಿತ ಮತ್ತು ಕೇಂದ್ರ ಭಂಡಾರಕ್ಕೆ ವಾರ್ಷಿಕವಾಗಿ ಪೊಗದಿ ಕೊಡುವುದು ಮತ್ತು ಕೇಳಿದಾಗ ಸೈನ್ಯದ ಸಹಾಯ ಒದಗಿಸುವುದು ಈ ಎರಡು ವಿಚಾರಗಳನ್ನು ಬಿಟ್ಟರೆ ಪ್ರಾಂತೀಯ ಗವರ್ನರುಗಳು (ರಾಜ್ಯಪಾಲರು) ಸಂಪೂರ್ಣ ಸ್ವಾಯತ್ತತೆಯನ್ನು ಪಡೆದಿದ್ದರು. ಹಾಗೆಯೇ ಜಿಲ್ಲಾ ಮತ್ತು ಗ್ರಾಮಾಡಳಿತವೂ ಪ್ರಾಚೀನ ಕಾಲದಿಂದ ಬಂದಿದ್ದ ಸ್ವಯಂ ಸಂಪೂರ್ಣತೆಯ ಮಾದರಿಯನ್ನು ಉಳಿಸಿಕೊಂಡು ಬಂದಿದ್ದಿತು.

ಬಿಜಾಪುರದ ಸುತ್ತಲಿನ ಪ್ರಖ್ಯಾತ ಗೋಡೆಯು ನಿರ್ಮಾಣಗೊಂಡಿರುವುದು ಅಲಿ ಆದಿಲ್‌ಷಾಹನ ಆಳ್ವಿಕೆಯ ಕಾಲದಲ್ಲಿಯೇ. ಸುತ್ತಲೂ ಗೋಡೆಯಿಂದ ಆವೃತವಾದ ನಗರಕ್ಕೆ ಬೇಕಾದಷ್ಟು ನೀರು ಒದಗಿಸಲು ಸಹಾಯವಾಗುವಂತೆ ಒಂದು ಮೇಲು ಕಾಲುವೆಯನ್ನು ಕೊರೆಸಿದ್ದನಲ್ಲದೆ, ಒಂದು ದೊಡ್ಡ ಜಲಾಶಯವನ್ನೂ ನಿರ್ಮಿಸಿದನು. ಜಾಮಿ ಮಸೀದಿ, ಮೆಕ್ಕಾ ಮಸೀದಿ, ಮತ್ತು ಗಗನ ಮಹಲ್ ಅಥವಾ ಪ್ರಜಾ ಸಂಪರ್ಕ ಭವನ ಮೊದಲಾದ ವಿಶಿಷ್ಟ ಕಟ್ಟಡಗಳ ನಿರ್ಮಾಣವನ್ನು ಕೈಗೊಂಡು, ಅವನು ತನ್ನ ವಾಸ್ತುಶಿಲ್ಪದಲ್ಲಿನ ಅಭಿರುಚಿಯನನ್ನು ತೋರಿಸಿದನು. ಬಿಜಾಪುರದ ಅಲಿ ಆದಿಲ್‌ಷಾಹನು ತನ್ನ ರಾಜ್ಯವನ್ನು ವೈರಿಗಳಿಂದ ರಕ್ಷಣೆ ಮಾಡುವುದರ ಜೊತೆಗೆ ಅಲ್ಲಿನ ಜನರಿಗೆ ಉತ್ತಮ ಆಡಳಿತ ನೀಡುವುದರ ಮೂಲಕ ಜನಪರ ಕಾರ್ಯಗಳು ಕೈಕೊಂಡನು. ಇದರಿಂದ ಜನರ ಮನದಲ್ಲಿ ಶಾಶ್ವತವಾಗಿ ಉಳಿದುಕೊಂಡನು.

೧೫೮೦ರಲ್ಲಿ ಅಲಿ ಆದಿಲ್‌ಷಾಹನು ಮರಣ ಹೊಂದಿದ ನಂತರ ಬಿಜಾಪುರದ ಆಡಳಿತ ರಂಗದಲ್ಲಿ ಗೊಂದಲದ ವಾತಾವರಣ ಸೃಷ್ಟಿಗೊಂಡಿತು. ಏಕೆಂದರೆ ಅಲಿ ಆದಿಲ್‌ಷಾಹನು ಸಂತಾನಹೀನನಾಗಿದ್ದರಿಂದ ಅವನ ಮುಂದಿನ ಉತ್ತರಾಧಿಕಾರಿ ಯಾರು ಎಂಬುದು ಗೊಂದಲಕ್ಕೆ ಕಾರಣವಾಗಿತ್ತು. ಅರಮನೆಯ ಎಲ್ಲ ಮಂತ್ರಿಗಳು, ಕಾರಬಾರಿಗಳು

ಮತ್ತು ನೋಬೆಲ್ಸ್(ಶ್ರೀಮಂತವರ್ಗದವರು) ಬಂದು ಸೇರಿದರು. ಅವರ ಸ್ಥಿತಿ ಯಾವ ರೀತಿಯಾಗಿತ್ತು ಎಂದರೆ ನೀರಿನಿಂದ ಹೊರಬಿದ್ದ ಮೀನುಗಳಂತೆ ಗಾಬರಿಯಿಂದ ಚಡಪಡಿಸುತ್ತಿದ್ದರು. ಏಕೆಂದರೆ ಸುಲ್ತಾನನ ಸ್ಥಾನಕ್ಕೆ ಯಾವ ಮನುಷ್ಯನನ್ನು ಯೋಗ್ಯನೆಂದು ಗುರುತಿಸಿ ಗದ್ದುಗೆಯ ಮೇಲೆ ಕೂಡಿಸಲು ನಿರ್ಧರಿಸಬೇಕು ಎಂಬುದು ಸಭೆಯ ಉದ್ದೇಶವಾಗಿತ್ತು. ಈ ಸಭೆಯಲ್ಲಿ ವಿಧವೆ ರಾಣಿ ಚಾಂದ್‌ಬೀಬಿಯು ಉಪಸ್ಥಿತಿಯಾಗಿದ್ದಳು. ಈ ಸಭೆಯಲ್ಲಿ ಕಾಮಿಲ್‌ಖಾನ್‌ನು ಹಾಜರಾಗಿದ್ದನು. ಇವನು ಅಲಿ ಆದಿಲ್‌ಷಾಹನ ಆಡಳಿತದಲ್ಲಿ ಮಂತ್ರಿಯಾಗಿದ್ದನು. ಕಾಮಿಲ್‌ಖಾನನು ಕಾರಬಾರಿಗಳ ಜೊತೆಯಲ್ಲಿ ಚರ್ಚಿಸಿ ಒಂದು ನಿರ್ಣಯ ತೆಗೆದುಕೊಳ್ಳುವ ಮೊದಲು ಅಲಿ ಆದಿಲ್‌ಷಾಹನು ಜೀವಂತ ಇದ್ದಾಗ ಮೇಲಿಂದ ಮೇಲೆ, ನನ್ನ ನಂತರ ನನ್ನ ಸಹೋದರನ ಮಗ ಎರಡನೆಯ ಇಬ್ರಾಹಿಂನಿಗೆ ನನ್ನ ಉತ್ತರಾಧಿಕಾರಿಯಾಗಬೇಕು ಎಂದು ಹೇಳುತ್ತಿದ್ದನು ಎಂದು ಕಾಮಿಲ್‌ಖಾನನು ಈ ಸಭೆಯಲ್ಲಿ ತಿಳಿಸಿದನು. ಅಲಿ ಆದಿಲ್‌ಷಾಹನ ಆಸೆಯಂತೆಯೇ ಎರಡನೇ ಇಬ್ರಾಹಿಂನನ್ನು ಬಿಜಾಪುರದ ಸುಲ್ತಾನನನ್ನಾಗಿ ನೇಮಕ ಮಾಡಬೇಕೆಂದು ಎಲ್ಲ ಕಾರಬಾರಿಗಳೊಂದಿಗೆ ಚರ್ಚಿಸಿ ನಿರ್ಣಯ ತೆಗೆದುಕೊಂಡರು. ಈ ವಿಷಯ ಚಾಂದ್‌ಬೀಬಿಗೆ ತಿಳಿಸಲಾಯಿತು. ಅವರ ನಿರ್ಣಯವನ್ನು ಸ್ವೀಕರಿಸಿ ಸಿಂಹಾಸನಾರೋಹಣಕ್ಕೆ ಅನುಮತಿ ನೀಡಿದಳು.

೧೫೮೦ರಲ್ಲಿ ಎರಡನೆಯ ಇಬ್ರಾಹಿಂ ಆದಿಲ್‌ಷಾಹನನ್ನು ಸಿಂಹಾಸನದ ಮೇಲೆ ಕೂಡಿಸಲಾಯಿತು. ಆಗ ಅವನಿಗೆ ಕೇವಲ ಒಂಬತ್ತು ವಯಸ್ಸು ಆಗಿದ್ದರಿಂದ ರಾಜಪ್ರತಿನಿಧಿ ಅಥವಾ ರೀಜೆನ್ಸಿಯ ಅವಶ್ಯಕತೆಯುಂಟಾಯಿತು. ಅದೃಷ್ಟವಶಾತ್ ಸುಲ್ತಾನನ ದೊಡ್ಡಮ್ಮ, ವಿಧವೆ ರಾಣಿ ಚಾಂದ್‌ಬೀಬಿಯು ಅವನ ಪಾಲನೆಯ ಜವಾಬ್ದಾರಿ ಹೊರಲು ಸಿದ್ಧವಾಗಿದ್ದಳು. ಈ ಹಿಂದೆ ನಿಜಾಮ ಷಾಹನ ಆಸ್ಥಾನದಲ್ಲಿ ಸೇವೆ ಸಲ್ಲಿಸಿದ್ದ ಕಾಮಿಲ್‌ಖಾನನ್ನು ರಾಜ್ಯದ ವ್ಯವಹಾರಗಳನ್ನು ನೋಡಿಕೊಳ್ಳಲು ಇನ್ನೊಬ್ಬ ರೀಜೆಂಟನಾಗಿ ನೇಮಿಸಿದಳು. ಅವನು ಅಹಮದ್‌ನಗರದೊಂದಿಗೆ ಸಂಬಂಧಗಳನ್ನು ಉತ್ತಮವಾಗಿ ಕೂಡಿಸುತ್ತಾನೆ ಎಂಬ ನಿರೀಕ್ಷೆಯಿಂದ ಕಾಮಿಲ್‌ಖಾನನನ್ನು ರೀಜೆಂಟನನ್ನಾಗಿ ನೇಮಿಸಲಾಯಿತು.

ಚಾಂದ್‌ಬೀಬಿಯು ಹೆಚ್ಚು ಕಾಲ ಅಲಿ ಆದಿಲ್ ಷಾಹನ ಆಡಳಿತದ ಅವಧಿಯಲ್ಲಿ ಕಾಲ ಕಳೆದಿದ್ದಳು. ಅವನ ಅವಧಿಯ ಆಡಳಿತವನ್ನು ದಕ್ಷಿಣ ಭಾರತದ ಉತ್ತಮ ಆಡಳಿತವೆಂದು ಪರಿಗಣಿಸಲಾಗಿದೆ.[೧೫] ಆದ್ದರಿಂದ ಚಾಂದ್‌ಬೀಬಿಗೆ ಎರಡನೆಯ ಇಬ್ರಾಹಿಂ ಆದಿಲ್‌ಷಾಹನ ಪ್ರತಿನಿಧಿಯಾಗಿ ಬಿಜಾಪುರದ ಆಡಳಿತ ಸುವ್ಯವಸ್ಥೆಯಾಗಿ ನಡೆಸಿಕೊಂಡು ಹೋಗುವಲ್ಲಿ ಹೆಚ್ಚು ಕಷ್ಟವಾಗಲಿಲ್ಲ. ಚಾಂದ್‌ಬೀಬಿಯು ಎರಡನೇ ಇಬ್ರಾಹಿಂ ಆದಿಲ್‌ಷಾಹನು ವಯಸ್ಸಿಗೆ ಬರುವವರೆಗೂ ಆಡಳಿತದ ಚುಕ್ಕಾಣಿ ಹಿಡಿದಳು. ಬಿಜಾಪುರದಲ್ಲಿ ಚಾಂದ್‌ಬೀಬಿಯ ಆಳ್ವಿಕೆಯ ಸಮಯದಲ್ಲಿ ಅಲ್ಲಿನ ಜನಸಂಖ್ಯೆಯ ೧.೫೦೦.೦೦೦ದಷ್ಟು ಇತ್ತು. ರಾಜ್ಯವು ಬಹೃತ್ ಶಕ್ತಿಶಾಲಿ ಹಾಗೂ ಸಮೃದ್ಧಿಭರಿತವಾಗಿತ್ತು. ಆ ಸಮಯದಲ್ಲಿ ನೋಬೆಲ್ಸ್‌ರು, ಮಂತ್ರಿಗಳು ಮತ್ತು ಸ್ಥಳೀಯ ರಾಜ್ಯಗಳ ಅರಸರು ಹೆಚ್ಚು ಸಮಯದವರೆಗೂ ಬಿಜಾಪುರಕ್ಕೆ ರಾಜನಿಷ್ಠೆಯಿಂದ ಕಾರ್ಯ ನಿರ್ವಹಿಸುತ್ತಿದ್ದರು. ಅವರ ನೆರವಿನಿಂದ ವೈರಿ ಪಡೆಗಳಿಂದ ರಕ್ಷಣೆಗಾಗಿ ಬೃಹತ್ ಸೈನ್ಯವನ್ನು ನಿರ್ಮಿಸಿ ಅವರಿಗೆ ವಿವಿಧ ರೀತಿಯ ತರಬೇತಿ ನೀಡಿದ್ದಳು.

ಬಿಜಾಪುರದಲ್ಲಿ ಚಾಂದ್‌ಬೀಬಿಯು ಎರಡನೇ ಇಬ್ರಾಹಿಂ ಆದಿಲ್‌ಷಾಹನ ಪ್ರತಿನಿಧಿಯಾಗಿ ಸ್ವತಂತ್ರವಾಗಿ ಆಳ್ವಿಕೆ ಮಾಡುತ್ತಿದ್ದಳು. ಇದು ನೆರೆ ರಾಜ್ಯಗಳಾದ ಅಹಮದನಗರ ಮತ್ತು ಗೋಲ್ಕೊಂಡದ ಸುಲ್ತಾನರಿಗೆ ನುಂಗಲಾರದ ತುತ್ತಾಗಿತ್ತು. ಆದ್ದರಿಂದ ಅಹಮದನಗರ ಮತ್ತು ಗೋಲ್ಕೊಂಡದ ಸುಲ್ತಾನರು ಒಪ್ಪಂದ ಮಾಡಿಕೊಂಡು ಬಿಜಾಪುರದ ಗಡಿ ಪ್ರದೇಶಗಳ ಮೇಲೆ ದಾಳಿ ಮಾಡಿದರು. ಚಾಂದ್‌ಬೀಬಿಯು ಕಿಶ್ವರಖಾನ್ ರೀಜೆಂಟನನ್ನು ಜೊತೆಗೂಡಿ ಬಲಿಷ್ಠವಾದ ಸೈನ್ಯದೊಂದಿಗೆ ಹೋಗಿ ವೈರಿಗಳ ಮೈತ್ರಿಕೂಟದ ದಾಳಿಯನ್ನು ಎದುರಿಸಿದಳು. ಈ ಎರಡು ರಾಜ್ಯಗಳ ನಡುವಿನ ಯುದ್ಧದಲ್ಲಿ, ಅಹಮದನಗರದ ಸುಲ್ತಾನನ ದಂಡನಾಯಕನಾದ ಬಿಹ್‌ಜದ್-ಉಲ್-ಮುಲ್ಕ್‌ನನ್ನು 'ದಾರಾಸೇವ' ಎಂಬಲ್ಲಿ ಸಂಪೂರ್ಣವಾಗಿ ಸೋಲಿಸಿದಳು. ಅವನು ಸೋತು ಪ್ರಾಣಭಯದಿಂದ ಯುದ್ಧಭೂಮಿ ಬಿಟ್ಟು ಓಡಿ ಹೋದನು. ಆ ಸಮಯದಲ್ಲಿ ವೈರಿಗಳ ವಶದಲ್ಲಿರುವ ಮದ್ದುಗುಂಡುಗಳ ರಾಶಿಯೂ, ಅನೇಕ ಆನೆಗಳೂ ಮತ್ತು ಶಸ್ತ್ರಾಸ್ತ್ರಗಳು ಚಾಂದ್‌ಬೀಬಿಯ ವಶವಾದವು. ನಂತರ ಗೋಲ್ಕೊಂಡದ ಸೈನ್ಯವು ಕೂಡ ಸೋತು ಶರಣಾಗತವಾಗಿ ಗೋಲ್ಕೊಂಡದ ಕೋಟೆ ಸೇರಿದವು. ಚಾಂದ್‌ಬೀಬಿಯು ಬಿಜಾಪುರದ ಮೇಲೆ ಆವರಿಸಿದ್ದ ಗಂಡಾಂತರವನ್ನು ತಪ್ಪಿಸಿ, ಬಿಜಾಪುರ ನಗರವನ್ನು ರಕ್ಷಣೆ ಮಾಡಿದಳು.

**ಟಿಪ್ಪಣಿಗಳು**

೧. ಖಾದ್ರಿ ಎಸ್.ಎ., ಮೆಮೋಯರ್ಸ್ ಆಫ್ ಚಾಂದ್‌ಬೀಬಿ., ಉಸ್ಮಾನಿಯಾ ಯೂನಿವರ್ಸಿಟಿ, ಹೈದರಾಬಾದ್., ೧೯೩೮, ಪುಟ. ೩೯

೨. ಅದೇ, ಪುಟ ೩೯

೩. ಕ್ಯಾಪ್ಟನ್ ಸಿ.ಸಿ. ಕೌಲೇ, ಟೇಲ್ಸ್ ಆಫ್ ಆಹಮದ್‌ನಗರ, ಅಹಮದ್‌ನಗರ ೧೯೧೮, ಪುಟ, ೫೦

೪. ಅದೇ, ಪುಟ, ೫೨

೫. ಷೇಕ್ ಅಲಿ ಬಿ., ಕರ್ನಾಟಕ ಚರಿತ್ರೆ, ಸಂಪುಟ-೪, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭., ಪುಟ. ೮೭

೬. ಅದೇ, ಪುಟ, ೮೭

೭. ಅದೇ, ಪುಟ, ೮೮

೮. ಮಜುಂದಾರ್ ಆರ್.ಸಿ., ಮೊಗಲ್ ಸಾಮ್ರಾಜ್ಯ, ಸಂಪುಟ-೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೩, ಪುಟ ೧೮೫.

೯. ಷೇಕ್ ಅಲಿ ಬಿ., ಕರ್ನಾಟಕ ಚರಿತ್ರೆ, ಸಂಪುಟ-೪, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭, ಪುಟ, ೮೮

೧೦. ಮಜುಂದಾರ್ ಆರ್.ಸಿ., ಪೂರ್ವೋಕ್ತ, ಪುಟ.೧೮೯

೧೧. ಷೇಕ್ ಅಲಿ ಬಿ., ಪೂರ್ವೋಕ್ತ, ಪುಟ.೮೮

೧೨. ಕುಲಕರ್ಣಿ ಕೃಷ್ಣ ಕೊಲ್ಹಾರ., ಸಲಾತೀನ, ಬುಸಾತಿನ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೯ ಪುಟ.೭೯

೧೩. ಷೇಕ್ ಅಲಿ ಬಿ., ಪೂರ್ವೋಕ್ತ, ಪುಟ.೮೯

೧೪. ಕುಲಕರ್ಣಿ ಕೃಷ್ಣ ಕೋಲ್ಹಾರ, ಪೂರ್ವೋಕ್ತ, ಪುಟ. ೭೯

೧೫. ಅದೇ, ಪುಟ.೧೨೦-೧೨೧

೧೬. ಅದೇ, ಪುಟ.೧೨೨

೧೭. ಷೇಕ್ ಅಲಿ ಬಿ., ಪೂರ್ವೋಕ್ತ, ಪುಟ.೧೮೯

೧೮. ಅದೇ, ಪುಟ.೧೨೩

೧೯. ಮಜುಂದಾರ್. ಆರ್.ಸಿ., ಪೂರ್ವೋಕ್ತ, ಪುಟ.೧೯೨.

೨೦. ಖಾದ್ರಿ ಎಸ್.ಎ., ಪೂರ್ವೋಕ್ತ, ಪುಟ.೧೯೨

೨೧. ಕ್ಯಾಪ್ಟನ್ ಪಿ.ಸಿ. ಕೌಲೇ, ಪೂರ್ವೋಕ್ತ, ಪುಟ.೫೦

* * *

## ಅಧ್ಯಾಯ ನಾಲ್ಕು

# ಚಾಂದ್‌ಬೀಬಿಯ ಆಂತರಿಕ ಸಂಘರ್ಷಗಳು

೪.೧. ಚಾಂದ್‌ಬೀಬಿಯ ವಿರುದ್ಧ ಒಳಪಿತೂರಿ

೪.೧.೧. ಮೊದಲನೆ ರೀಜೆಂಟ ಕಾಮಿಲ್‌ಖಾನ

೪.೧.೨. ಎರಡನೆಯ ರೀಜೆಂಟನಾಗಿ ಕಿಶ್ವರಖಾನ

೪.೧.೩. ಚಾಂದ್‌ಬೀಬಿಯ ಸೆರೆಮನೆ ವಾಸ

೪.೧.೪. ಮೂರನೆಯ ರೀಜೆಂಟನಾಗಿ ಇಕ್ಲಾಸ್‌ಖಾನ

೪.೧.೫. ರೀಜೆಂಟನಾಗಿ ಅಬುಲ್‌ಹಸನ್ ಮತ್ತು ದಿಲಾವರಖಾನ

೪.೨. ಬಿಜಾಪುರದಿಂದ ಅಹಮದನಗರಕ್ಕೆ ಆಗಮನ

೪.೩. ಅಹಮದನಗರದ ಸಿಂಹಾಸನಕ್ಕಾಗಿ ಹೋರಾಟಗಳು

೪.೪. ಅಹಮದನಗರದಲ್ಲಿ ಅಧಿಕಾರ ಪಡೆದ ಬಗೆ

## ಚಾಂದ್‌ಬೀಬಿಯ ಆಂತರಿಕ ಸಂಘರ್ಷಗಳು

ಎರಡನೇ ಇಬ್ರಾಹಿಂನು ಒಂದನೆಯ ಅಲಿ ಆದಿಲ್‌ಷಾಹನ ಪ್ರೀತಿ ಪಾತ್ರನಾಗಿದ್ದನು. ಆತನನ್ನೇ ಪಟ್ಟಕ್ಕೆ ತರಲಾಯಿತು. ಆಗ ಅವನು ೯ ವರುಷದ ಬಾಲಕನಾಗಿದ್ದನು. ಮುಂದಿನ ಸುಮಾರು ಹತ್ತು ವರ್ಷಗಳ ಕಾಲ ಬಿಜಾಪುರದ ರಾಜ್ಯವು ನಾಲ್ಕು ಪ್ರಮುಖ ರಾಜಪ್ರತಿನಿಧಿಗಳಿಂದಲೇ ಆಳಲ್ಪಟ್ಟಿತು.

ಬಾಲಕ ಇಬ್ರಾಹಿಂನು ರಾಜ್ಯಾಡಳಿತ ನಡೆಸಲು ಅಸಮರ್ಥನಾಗಿದ್ದರಿಂದ ಆಡಳಿತದ ಸೂತ್ರ ಸಹಜವಾಗಿಯೇ ಪ್ರಧಾನಮಂತ್ರಿಯ ಕೈಯಲ್ಲಿ ಇತ್ತು. ಆತ ಬಾದಷಹನ 'ಪಾಲನಕರ್ತ'ನಾಗಿಯೂ ಇರುತ್ತಿದ್ದನು, ಸುಲ್ತಾನನ ಸುರಕ್ಷತೆ ಹಾಗೂ ಆತನ ಅಭ್ಯಾಸ ಇತ್ಯಾದಿಗಳ ಜವಾಬ್ದಾರಿಯು ಸುಲ್ತಾನನ ದೊಡ್ಡಮ್ಮ, ವಿಧವೆ ರಾಣಿ ಚಾಂದ್‌ಬೀಬಿಯದಾಗಿತ್ತು. ಇವಳು ಬಿಜಾಪುರ ರಾಜ್ಯದ ಎಲ್ಲ ಅಧಿಕಾರಗಳನ್ನು ತನ್ನ ಹತೋಟಿಗೆ ತೆಗೆದುಕೊಂಡು ಆಡಳಿತ ನಡೆಸತೊಡಗಿದ್ದಳು. ರಾಜ್ಯದ ಎಲ್ಲ ವ್ಯವಹಾರಗಳನ್ನು ನೋಡಿಕೊಳ್ಳುವುದು ಮತ್ತು ಸುಲ್ತಾನನ ಪಾಲನೆ ಮಾಡುವುದು ಕಷ್ಟವಾಗುತ್ತಿತ್ತು. ಆದಕ್ಕಾಗಿ ತನ್ನ ಸಹಾಯಕ್ಕಾಗಿ ಇನ್ನೊಬ್ಬ ರೀಜೆಂಟ್‌ನನ್ನು ನೇಮಕ ಮಾಡಿದಳು. ಚಾಂದ್‌ಬೀಬಿಯ ಆಡಳಿತದ ಸಮಯದಲ್ಲಿ ಬಿಜಾಪುರ ರಾಜ್ಯದ ಆಸ್ಥಾನದಲ್ಲಿ ಮುಸಲ್ಮಾನರಲ್ಲಿಯೇ ಎರಡು ಮುಖ್ಯ ಪಂಗಡಗಳಿದ್ದವು. ಒಂದು ವಿದೇಶಿಯರದ್ದು, ಅವರು ಸಾಮಾನ್ಯವಾಗಿ ಇರಾನ್, ತುರ್ಕಿಸ್ಥಾನಗಳಿಂದ ಬಂದ ಮುಸಲ್ಮಾನರಾಗಿದ್ದು ಅವರದೇ ಒಂದು ಗುಂಪು ಇತ್ತು. ಅದಕ್ಕೆ ವಿದೇಶಿ ಗುಂಪು ಎಂದು ಕರೆಯುತ್ತಿದ್ದರು. ಇನ್ನೊಂದು ಗುಂಪು ಬಹಳ ದಿನಗಳಿಂದ ಇಲ್ಲಿಯೇ ಉಳಿದು ಬೆಳೆದವರಾಗಿದ್ದರು. ಅವರಿಗೆ ಸಾಮಾನ್ಯವಾಗಿ ದಖಣಿ ಎಂದು ಕರೆಯಲಾಗುತ್ತಿತ್ತು.[1] ಈ ದಖಣಿ ಮುಸಲ್ಮಾನರಲ್ಲಿಯೇ ಬಹಳ ದಿನಗಳ ಹಿಂದೆ ಭಾರತಕ್ಕೆ ಬಂದು ನೆಲೆಸಿದ, ಹಬಶೀಗಳು ಅಂದರೆ ಅಬಿಸೀನಿಯಾದಿಂದ ಬಂದ ಮುಸಲ್ಮಾನರು ಸೇರಿಕೊಂಡಿದ್ದರು.[2] ಆದ್ದರಿಂದಲೇ ಈ ಗುಂಪಿಗೆ ದಖಣಿಯ ಜೊತೆಗೆ ಹಬಶೀ ಎಂದು ಹೆಸರು ಬಂದಿತ್ತು. ಈ ಗುಂಪುಗಳ ಉಗಮ ಬಹಮನಿ ರಾಜ್ಯದಲ್ಲಿಯೇ ಆಗಿ ಮುಂದೆ ಷಾಹಿ ರಾಜ್ಯಗಳಲ್ಲೂ ಮುಂದುವರಿಯಿತು ಮತ್ತು ಅಂದಿನಿಂದಲೇ ಪರಸ್ಪರ ಒಬ್ಬನ್ನೊಬ್ಬರು ದ್ವೇಷಿಸುತ್ತಲೇ ಬಂದರು. ಸಂದರ್ಭಾನುಸಾರ ಒಂದು ಗುಂಪಿನ ವ್ಯಕ್ತಿಗೆ ಅಧಿಕಾರ ಸೂತ್ರಗಳು ದೊರೆತರೆ ಇನ್ನೊಂದು ಗುಂಪಿನ ಜಹಗೀರುಗಳನ್ನು ಮತ್ತು ಇನಾಮುಗಳನ್ನು ರದ್ದು ಮಾಡುತ್ತಿದ್ದರು ಮತ್ತು ಅವುಗಳನ್ನು ತಮ್ಮ ಗುಂಪಿನ ಜನರಿಗೆ ಕೊಡುತ್ತಿದ್ದರು. ಬಿಜಾಪುರದ ಇತಿಹಾಸದ ತುಂಬ ಇಂಥ ಹಲವಾರು ಸನ್ನಿವೇಶಗಳು ಉಂಟಾದದ್ದನ್ನು ಕಾಣುತ್ತೇವೆ. ಇಂಥ ಒಂದು ಪರಿಸ್ಥಿತಿ ತಿಕ್ಕಾಟದ ವಾತಾವರಣದಲ್ಲಿಯೇ ಎರಡನೆಯ ಇಬ್ರಾಹಿಂನ ಪ್ರತಿನಿಧಿಯಾಗಿ ಚಾಂದ್‌ಬೀಬಿಯು ಅಧಿಕಾರ ವಹಿಸಿಕೊಂಡಿದ್ದಳು.

### ೪.೧. ಚಾಂದ್‌ಬೀಬಿಯ ವಿರುದ್ಧ ಒಳಪಿತೂರಿ

ಬಿಜಾಪುರ ರಾಜ್ಯದ ಎಲ್ಲ ವ್ಯವಹಾರಗಳನ್ನು ಮತ್ತು ಎರಡನೇ ಇಬ್ರಾಹಿಂ ಆದಿಲ್‌ಷಾಹ ಸುಲ್ತಾನನ ಜವಾಬ್ದಾರಿಯನ್ನು ವಹಿಸಿಕೊಂಡು ಆಡಳಿತ ನಡೆಸಿಕೊಂಡು ಹೋಗುವುದು ಚಾಂದ್‌ಬೀಬಿಗೆ ಕಷ್ಟವಾಗಿತ್ತು. ಅದಕ್ಕಾಗಿ ತನ್ನ ಸಹಾಯಕ್ಕೆ ರೀಜೆಂಟರನ್ನು ನೇಮಕ ಮಾಡಿಕೊಂಡಿದ್ದಳು.

### ೪.೧.೧. ಮೊದಲನೇ ರೀಜೆಂಟ್ ಕಾಮಿಲ್‌ಖಾನ

ಕಾಮಿಲ್‌ಖಾನನು ಪ್ರಾರಂಭದಲ್ಲಿ ರಾಜ್ಯದ ಸರದಾರ(ಅಮೀರ)ರಲ್ಲೊಬ್ಬನಾಗಿದ್ದನು. ಇವನು ಒಂದನೇ ಅಲಿ ಆದಿಲ್‌ಷಾಹನ ಆಡಳಿತ ಅವಧಿಯಲ್ಲಿ ಮಹಾಲಿ (ಕಂದಾಯ) ಹಾಗೂ ಮುಲಕೀ (ವಸೂಲಿ) ಖಾತೆಗಳ ಮುಖ್ಯಸ್ಥನಾಗಿದ್ದನು.[೩] ಬಾದಷಹರ ಸರಕಾರದ ರಾಜಧಾನಿಯ ವ್ಯವಸ್ಥೆ, ಆಡಳಿತ ಹಾಗೂ ಎಲ್ಲ ನೌಕರ ವರ್ಗದವರು, ಇಲಾಖೆ ಪ್ರಮುಖರು, ಇತ್ಯಾದಿಗಳ ಮೇಲೆ ಮುಖ್ಯಸ್ಥನಾಗಿ ಕಾರ್ಯ ನಿರ್ವಹಿಸಿದನು. ಮೊದಮೊದಲಿಗೆ ಕಾಮಿಲ್‌ಖಾನನು ಉತ್ತಮ ನಡತೆಯನ್ನು ಧಾರಣ ಮಾಡಿದ್ದನು. ಇವನ ನಡವಳಿಕೆಯ ಮೇಲೆ ಚಾಂದ್‌ಬೀಬಿಯು ಕಾಮಿಲ್‌ಖಾನನನ್ನು ರೀಜೆಂಟನನ್ನಾಗಿ ನೇಮಿಸಿದ್ದಳು. ಇವನನ್ನು ನೇಮಿಸಲು ಇನ್ನೊಂದು ಕಾರಣವೆಂದರೆ ಈ ಮೊದಲು ಅವನು ನಿಜಾಮ ಷಾಹನ ಸೇವೆಯಲ್ಲಿದ್ದನು. ಚಾಂದ್‌ಬೀಬಿಯು ಕೂಡ ಅಹಮದನಗರದವಳು ಆಗಿದ್ದಳು. ಇದರಿಂದ ತವರು ಮನೆಯ ವ್ಯಾಮೋಹದ ಮೇಲೆ ಮತ್ತು ಎರಡು ರಾಜ್ಯಗಳ ನಡುವೆ ಉತ್ತಮ ಸಂಬಂಧ ಕಲ್ಪಿಸಬಹುದು ಎಂಬ ಆಸೆಯಿಂದ ಕಾಮಿಲ್‌ಖಾನನನಿಗೆ ಎರಡನೇ ಇಬ್ರಾಹಿಂ ಆದಿಲ್‌ಷಾಹನ ರೀಜೆಂಟನನ್ನಾಗಿ ನೇಮಿಸಲಾಯಿತು.

ಕಾಮಿಲ್‌ಖಾನನು ದಖಣಿ ಸರದಾರನಾಗಿದ್ದನು. ಇದರಿಂದ ಎಲ್ಲ ಆಡಳಿತರಂಗದಲ್ಲಿ ದಖಣಿ ಸರದಾರರನ್ನು ನೇಮಿಸಿದನು. ಕೆಲವೇ ದಿನಗಳಲ್ಲಿ ಸರ್ವಾಧಿಕಾರಿಯಾಗಿ ಆಡಳಿತ ನಡೆಸಲು ಪ್ರಾರಂಭಿಸಿದನು. ಅಷ್ಟೇ ಅಲ್ಲದೆ ಮೊದಲು ರಾಜ್ಯ ಭಂಡಾರವನ್ನು ಕೊಳ್ಳೆ ಹೊಡೆಯತೊಡಗಿದನು ಮತ್ತು ಸರ್ವಾಧಿಕಾರಿಯಾದ ಸುಲ್ತಾನನ ಸಿಂಹಾಸನದ ಮೇಲೆಯೇ ಕಣ್ಣು ಹಾಕಿದನು. ಆದರೆ ಮೊದಲನೇ ಅಲಿ ಆದಿಲ್‌ಷಾಹನ ಹೆಂಡತಿ ಇತಿಹಾಸದಲ್ಲಿ ವೀರೋದಾತ್ತ ರಾಣಿ ಎಂದೇ ಹೆಸರಾದ ಚಾಂದ್‌ಬೀಬಿ ಕಾಮಿಲ್‌ಖಾನನಿಗೆ ಸರ್ವಾಧಿಕಾರಿಯಾಗಿ ಮುಂದುವರಿಯಲು ಆಸ್ಪದ ಕೊಡಲಿಲ್ಲ. ಎರಡು ತಿಂಗಳಲ್ಲಿ ಕೊಳ್ಳೆ ಹೊಡೆದ ಹಣವನ್ನು ದೋಚಿಕೊಂಡು ತನ್ನ ಜಹಗೀರು ಸ್ಥಳವಾದ ಕರಾಡಕ್ಕೆ ಓಡಿಹೋಗಬೇಕೆನ್ನುವಾಗಲೇ ಕಿಶ್ವರ್‌ಖಾನನ ಮಗ ಹಾಜಿ ಕಿಶ್ವರಖಾನ ಎಂಬ ಸರದಾರನನ್ನು ಚಾಂದ್‌ಬೀಬಿಯು ಬೆನ್ನಟ್ಟಿಸಿ, ದಾರಿಯಲ್ಲಿ ಕಾಮಿಲ್‌ಖಾನನನ್ನು ಕೊಲ್ಲಿಸಿದಳು. ಕೊಂದ ಕಿಶ್ವರಖಾನನು ಬಿಜಾಪುರ ರಾಜ್ಯಕ್ಕೆ ಮರಳಿದನು.



### ೪.೧.೨. ಎರಡನೆಯ ರೀಜೆಂಟನಾಗಿ ಕಿಶ್ವರಖಾನ್

ಚಾಂದ್‌ಬೀಬಿಯು ರಾಜ್ಯದಲ್ಲಿಯ ಆಂತರಿಕ ಗಲಭೆ ಎಬ್ಬಿಸಿದ ಕಾಮಿಲ್‌ಖಾನನ ದಂಗೆಯನ್ನು ಕಿಶ್ವರಖಾನನ ಬೆಂಬಲದಿಂದ ದಮನ ಮಾಡಿದಳು. ರಾಜ್ಯದಲ್ಲಿಯ ಆಂತರಿಕ ಗಲಭೆ ಚಿಕ್ಕದಾಗಿತ್ತಾದರೂ ನೆರೆ ರಾಜ್ಯಗಳಿಗೆ ಇದು ಆಕ್ರಮಿಸಲು ಅವಕಾಶವಾಯಿತು. ಅಹಮದನಗರದ ಮುರ್ತಜಾ ನಿಜಾಮ ಷಾಹನು ಸೋಲಾಪುರ ಪರಿಸರದ

ಸ್ಥಳವನ್ನು ತಿರುಗಿ ಪಡೆಯಲು ಪ್ರಯತ್ನಿಸಿದನು. ಉಳಿದ ಗಡಿಗಳಲ್ಲಿ ಕುತುಬ್‌ಷಾಹನೂ ಮತ್ತು ವಿಜಯನಗರದ ಹಿಂದೂ ರಾಜರೂ ದಂಗೆ ಪ್ರಾರಂಭಿಸಿದರು. ನಾಲ್ಕು ದಿಕ್ಕಿನಿಂದಲೂ ಎದ್ದು ನಿಂತ ಶತ್ರುಗಳನ್ನು ಎದುರಿಸಲು ಕಿಶ್ವರಖಾನನನ್ನು ರೀಜೆಂಟನನ್ನಾಗಿ ನೇಮಿಸಿದಳು. ಅವನು ಅಫಜಲಖಾನನ ನೇತೃತ್ವದಲ್ಲಿ ಸೈನ್ಯವನ್ನು ಕಳಿಸಿದನು. ರಾಜ್ಯದಲ್ಲಿಯ ಹಿರಿಯ ಅಮೀರರಾದ ಐನುಲ್‌ಮುಲ್ಕ, ಅಂಕುಶಖಾನ, ಇಕ್ಲಾಸ್‌ಖಾನ, ದಿಲಾವರಖಾನ ಮೊದಲಾದವರು ಕೂಡ ತಮ್ಮ ಸೈನ್ಯಗಳೊಂದಿಗೆ, ಅಫಜಲ್‌ಖಾನನಿಗೆ ಸಹಾಯ ನೀಡಿದರು. ಯೋಜನಾಬದ್ಧವಾಗಿ ರೂಪಿಸಿದ ಯುದ್ಧದಲ್ಲಿ ಅಫಜಲ್‌ಖಾನನಿಗೆ ಜಯ ದೊರೆಯಿತು. ಕುತುಬ್‌ಷಾಹ ಮತ್ತು ನಿಜಾಮಷಾಹರನ್ನು ಸೋಲಿಸಿ ಅನೇಕ ಆನೆ, ಕುದುರೆ, ಒಂಟೆಗಳು ಮತ್ತು ಯುದ್ಧ ಸಾಮಗ್ರಿಗಳು, ಬಿಜಾಪುರ ಸೈನ್ಯದ ವಶವಾದವು. ಈ ವಿಜಯ ಕಿಶ್ವರಖಾನನ ತಲೆಗೇರಿತು. ಯುದ್ಧದಲ್ಲಿ ಗೆದ್ದ ಪದಾರ್ಥಗಳ ಮೇಲೆ ಕಣ್ಣು ಹಾಕಿದನು. ಅದರೊಂದಿಗೆ ತನ್ನ ಸರ್ವಾಧಿಕಾರದ ಬಲವನ್ನು ತೋರಿಸಲು ಮುಂದಾದನು. ಹಳೆಯ ನೌಕರರ ಎತ್ತಂಗಡಿ ಪ್ರಾರಂಭಿಸಿದನು. ಎಲ್ಲ ಕಡೆಗೂ ತನ್ನ ಆಪ್ತರನ್ನೇ ನೇಮಿಸಿದನು. ಆದ್ದರಿಂದ ಇಂಥ ಸಮಯದಲ್ಲಿ ಕೆಲವು ದಿನಗಳವರೆಗೆ ಷಾಹ ದುರ್ಗದ ಕೋಟೆಯಲ್ಲಿ ಇದ್ದರೆ ಆನೆ ಕುದುರೆಗಳಿಗೂ ವಿಶ್ರಾಂತಿ ದೊರೆಯುತ್ತದೆ ಎಂಬುದಾಗಿ ತೀರ್ಮಾನಿಸಿ, ಅಮೀರರಿಗೆ ಬರಲು ಆಜ್ಞೆ ಪತ್ರಗಳನ್ನು ಕಳುಹಿಸಿದನು. ಎಲ್ಲರೂ ಕೂಡಿ ವಿಚಾರ ಮಾಡಿ ಶತ್ರುಗಳನ್ನು ಎದುರಿಸಲು ಸಂಚು ರೂಪಿಸುವುದು ಅವನ ಉದ್ದೇಶವಾಗಿತ್ತು. ಅಷ್ಟರಲ್ಲಿ ಅಮೀರ್ ಜನರ ಹೆಸರಿನಲ್ಲಿ ಆಜ್ಞೆ ಪತ್ರಗಳು ಬಂದು ಮುಟ್ಟಿದವು. ಅವುಗಳನ್ನು ಕಿಶ್ವರಖಾನನು ಚಾಂದ್‌ಬೀಬಿ ಸುಲ್ತಾನಳ ಅಪ್ಪಣೆಯಿಲ್ಲದೆ ಕಳುಹಿಸಿದನು. ನಿಜಾಮಷಾಹನ ಸೈನ್ಯದಿಂದ ಲೂಟಿ ಮಾಡಿದ ಆನೆಗಳನ್ನು ಇತ್ತ ಕಳಿಸಿಕೊಡಬೇಕು ಎಂದು ಅದರಲ್ಲಿ ಬರೆಯಲಾಗಿತ್ತು.[೪] ಇದರಿಂದಾಗಿ ಮತ್ತೆ ಕಿಶ್ವರಖಾನನ ಕುರಿತು ಎಲ್ಲ ಅಮೀರ ಜನರ ಮನಸ್ಸು ಕಲುಷಿತಗೊಂಡಿತು. ಅವರ ಅಂತಃಕರಣ ದುಃಖಿತವಾದವು. ಅವರೆಲ್ಲರೂ ಕೂಡಿ ಚಾಂದ್‌ಬೀಬಿಗೆ ಒಂದು ಪತ್ರವನ್ನು ಬರೆಯಬೇಕೆಂದು ವಿಚಾರಿಸಿದರು. 'ಮುಸ್ತಫಖಾನನನ್ನು ಬಂಕಾಪುರದಿಂದ ಕರೆಯಿಸಿ ರಾಜ್ಯದ ಕಾರ್ಯಭಾರಗಳನ್ನು ಆತನ ಕಡೆಗೆ ವಹಿಸಬೇಕೆಂಬ ಆಜ್ಞೆಯಾಗಬೇಕು, ನಿಧನರಾದ ಬಾದಷಹರ ಕಾಲದಲ್ಲಿಯಂತೆ ಮುಸ್ತಫಖಾನನಿಗೆ ಜಮುಲುಲ್ಮುಲ್ಕ ಮತ್ತು ವಕೀಲುಲ್ ಸಲ್ತನತ್ ಎಂಬ ಎರಡು ಪದವಿಗಳನ್ನು ನೀಡಬೇಕು, ಕಿಶ್ವರಖಾನನು ಗರ್ವದ ಮಧ್ಯಪಾನದ ಮದದಲ್ಲಿದ್ದಾನೆ, ಅವನು ನಮಗೆಲ್ಲರಿಗೂ ತೊಂದರೆ ಕೊಡುವುದರಲ್ಲಿದ್ದಾನೆ, ಆತನ ಸೇವೆಯ ಆಸೆಯನ್ನು ಮತ್ತೆ ಹಿಡಿಯಬೇಡಿರಿ' ಎಂಬುದಾಗಿ ಬರೆಯಬೇಕೆಂದು ನಿರ್ಧರಿಸಲಾಯಿತು. ಈ ಎಲ್ಲ ಯೋಜನೆಗಳ ತುಸು ಅಂಶ ಕಿಶ್ವರಖಾನನ ಕಿವಿಯ ಮೇಲೂ ಬಿತ್ತು. ಆತ ಈ ಸುದ್ದಿ ತಿಳಿಯುತ್ತಲೇ ಗರ್ವದಿಂದ ಎದೆಯುಬ್ಬಿಸಿಕೊಂಡು ನಿರ್ಭಯನಾಗಿ ಬಲಾತ್ಕಾರದ ಮೈದಾನದಲ್ಲಿ ಹೆಜ್ಜೆಗಳನ್ನು ಮುಂದಿಟ್ಟನು.

ಕಿಶ್ವರಖಾನನಿಗೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ಮುಸ್ತಫಾಖಾನನ್ನು ದಮನ ಮಾಡುವುದು ಅನಿವಾರ್ಯವಾಗಿತ್ತು. ಮುಸ್ತಫಾಖಾನನು ಬಂಕಾಪುರದ ಹತ್ತಿರದ ವಿಲನೋರದ ಕೋಟೆಯಲ್ಲಿ ಇರುತ್ತಿದ್ದನು. ಆತನ ಮೇಲೆ ಐದು ಜನ ಅಮೀರರನ್ನು ಕಳುಹಿಸಲಾಯಿತು. ಕಿಶ್ವರಖಾನ ಹಾಗೂ ಮುಸ್ತಫಾಖಾನನ ಜನರ ಮಧ್ಯೆ ಯುದ್ಧಗಳಾದವು. ಕೊನೆಯಲ್ಲಿ ಮುಸ್ತಫಾಖಾನನು ಸೋತು ಯುದ್ಧದಿಂದ ಹಿಂತಿರುಗಿದನು. ಹಿಂದೂ ಜನರ ಒಂದು ಕೋಟೆಯಲ್ಲಿ ಆಶ್ರಯ ಪಡೆದನು. ಆಗ ಕೋಟೆಯಲ್ಲಿ ಇರುತ್ತಿದ್ದ ಜನರು ಕಿಶ್ವರಖಾನನ ಸೈನ್ಯವನ್ನು

ಸ್ವಾಗತಿಸಿದರು. ಆದ್ದರಿಂದ ಕೋಟೆಯ ಒಳಗಡೆ ಬರಲು ಮುಸ್ತಫಾಖಾನನಿಗೆ ಬಾಗಿಲು ತೆರೆಯಲಿಲ್ಲ. ಕೋಟೆಯ ಮೇಲೆ ಏರಿಬರುವಂತೆ ಮುಸ್ತಫಾಖಾನನಿಗೆ ಒಂದು ಹಗ್ಗವನ್ನು ಕೆಳಗೆ ಬಿಟ್ಟರು. ಮುಸ್ತಫಾಖಾನನು ಹಗ್ಗದ ಮುಖಾಂತರ ಅರ್ಧ ಕೋಟೆಯನ್ನು ಏರುತ್ತಿದ್ದಂತೆ ಕಿಶ್ವರಖಾನನ ಸೈನ್ಯದವರಿಗೆ ವಿಷಯ ತಿಳಿಯಿತು. ತಕ್ಷಣ ಓಡಿ ಬಂದು ಮುಸ್ತಫಾಖಾನನನ್ನು ಜಗ್ಗಿ ಕೆಳಗಿಳಿಸಿ ಅವನನ್ನು ಬಂಧಿಸಿ ಬಂಕಾಪುರ ಕೋಟೆಯಲ್ಲಿಟ್ಟರು. ಕೆಲವು ದಿನಗಳ ನಂತರ ಅವನನ್ನು ಕೊಲೆ ಮಾಡಲಾಯಿತು.

**ಚಾಂದ್‌ಬೀಬಿಯ ಸೆರೆಮನೆ ವಾಸ**

ಮುಸ್ತಫಾಖಾನನು ಬಹಳ ಸಂಭಾವಿತ ಮಂತ್ರಿಯಾಗಿದ್ದನು. ಸರಕಾರದಲ್ಲಿ ಅವನಂಥ ಮನುಷ್ಯ ಇನ್ನೊಬ್ಬನಿರಲಿಲ್ಲ. ಅಂಥ ಯೋಗ್ಯ ವ್ಯಕ್ತಿಯನ್ನು ಬಂಧಿಸಿದ ಮೇಲೆ ಕಿಶ್ವರಖಾನನಿಗೆ ಇನ್ನಷ್ಟು ಅಹಂಕಾರ ಬಂದಿತು. ಅದೇ ಅಹಂಕಾರದಿಂದ ಚಾಂದ್‌ಬೀಬಿಯ ಪಾರುಪತ್ಯದ ವಿಚಾರದಲ್ಲಿ ಬಿದ್ದನು. ಯಾಕೆಂದರೆ ಚಾಂದ್‌ಬೀಬಿಯು 'ಕಿಶ್ವರಖಾನನು ನಿರಂತರ ತನ್ನ ಅಂಕಿತದಲ್ಲಿರಬೇಕು, ಸೇವಕನಂತೆ ನೌಕರಿಯನ್ನು ಮಾಡುತ್ತಿರಬೇಕು, ಸುಲ್ತಾನ ಇಬ್ರಾಹಿಂ ಬಾದಷಹನನ್ನು ತನ್ನ ಮನೆಯಲ್ಲಿಟ್ಟು ಬೆಳೆಸಬೇಕು' ಎಂದು ಬಯಸುತ್ತಿದ್ದಳು. ಆದರೆ ಕಿಶ್ವರಖಾನನು ಇವುಗಳನ್ನು ಮಾನ್ಯ ಮಾಡುತ್ತಿರಲಿಲ್ಲ. ಯಾವುದೊಂದು ಕೆಲಸವನ್ನು ಮಾಡಬೇಕೆಂದು ಆಜ್ಞೆಯಾದರೆ, ಅದನ್ನು ಮಾಡದೇ ಆಲಸ್ಯದಿಂದ ದಿನ ಕಳೆಯುತ್ತಿದ್ದನು. ಅಂಥ ಸಮಯದಲ್ಲಿಯೇ ಮುಸ್ತಫಾಖಾನ ಬಂಧನದ ವಿಷಯ ಬಂದು ಮುಟ್ಟಿತು. ಚಾಂದ್‌ಬೀಬಿ ಸುಲ್ತಾನಳು ಕಿಶ್ವರಖಾನನ ಮೇಲೆ ಸಿಟ್ಟಾದಳು. ಅದೇ ಸಿಟ್ಟಿನಿಂದ ಕಿಶ್ವರಖಾನನ್ನು ಮಾತನಾಡಿಸಿದಳು. ಅವನನ್ನು ಬದಲಿಸಬೇಕೆಂಬ ದೃಷ್ಟಿಯಿಂದ ಬಾದಷಹಿ ನೌಕರವರ್ಗದಲ್ಲಿಯ ಹಿರಿಯ ವಕೀಲರು ಅಮೀರ್ ಜನರೊಂದಿಗೆ ಈ ವಿಷಯವನ್ನು ಪ್ರಸ್ತಾಪಿಸಿದಳು. ಎಲ್ಲ ಕಾರಬಾರಿಗಳೂ ಕಿಶ್ವರಖಾನನ ವಿಷಯದಲ್ಲಿ ತಿರುಗಿ ಬಿದ್ದಿದ್ದರು. ಅವನಿಗೆ ಸಹಾಯ ಮಾಡದಿರಲು ತನ್ನ ಅಧಿಕಾರಿಗಳಿಗೆ ತಿಳಿಸಿದಳು. ಅವನನ್ನು ಸರಿಸಿದ ನಂತರ ಎರಡನೇ ಇಬ್ರಾಹಿಂ ಆದಿಲ್‌ಷಾಹನ ರಾಜ್ಯಕಾರಭಾರವನ್ನು ತಾನೇ ಮಾಡಬೇಕೆಂದು ಬಯಸಿದಳು. ಈ ವಿಷಯ ಕಿಶ್ವರಖಾನನಿಗೆ ತಿಳಿಯಿತು. ಚಾಂದ್‌ಬೀಬಿಯು ಒಂದು ದಿನ ಸಂಕಟವನ್ನು ತರುತ್ತಾಳೆ, ಆ ಸಂಕಟದಿಂದ ಪರಿಹಾರ ಕಠಿಣವಾಗಿರುತ್ತದೆಂಬ ಭಯದಿಂದ ಚಾಂದ್‌ಬೀಬಿಯನ್ನು ಬಂಧಿಸಬೇಕೆಂದು ದೃಢ ಸಂಕಲ್ಪ ಮಾಡಿದನು."

ಚಾಂದ್‌ಬೀಬಿಯು ಅರಮನೆಯಿಂದ ಹೊರಗೆ ಹೋಗಬಾರದೆಂದು ಅವಳನ್ನು ಗೃಹಬಂಧನದಲ್ಲಿಟ್ಟನು. ಚಾಂದ್‌ಬೀಬಿಗೆ ಅರಮನೆಯ ಹೊರಗೆ ಹೋಗಲು ಸಾಧ್ಯವೇ ಆಗಲಿಲ್ಲ. ಅರಮನೆಯ ಖೋಜಾಗಳನ್ನು ಹಾಗೂ ವೃದ್ಧರನ್ನು ಕಳುಹಿಸಿ ಅವಳನ್ನು ಅರಮನೆಯಿಂದ ಎಳೆದು ಹೊರಗೆ ಕರೆದುಕೊಂಡು ಬರಲು ಹೇಳಿದನು. ಆದರೆ ವೃದ್ಧರು ಗೌರವವನ್ನು ಕಾಯ್ದರು. ಚಾಂದ್‌ಬೀಬಿಯ ಮರ್ಯಾದೆಯನ್ನು ತೆಗೆಯುವುದು ಅವರಿಂದಾಗಲಿಲ್ಲ. ಕಿಶ್ವರಖಾನನು ತನ್ನ ಸ್ವಂತ ಖೋಜಾಗಳನ್ನು ಮತ್ತು ವಿಶ್ವಾಸದ ಮುದುಕರನ್ನು ಕಳುಹಿಸಿದಾಗ ಅವರು ಚಾಂದ್‌ಬೀಬಿಯ ಗೌರವ, ದೊಡ್ಡತನ ಯಾವುದನ್ನೂ ಲೆಕ್ಕಿಸದೇ ನಿರ್ಭಯದಿಂದ ಅರಮನೆಯಿಂದ ಎಳೆದು ಹೊರತಂದರು. ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಅವಮಾನಕರವಾಗಿ ನಗರದಿಂದ ಹೊರಹಾಕಿ ಸಾತಾರೆಯ ಕೋಟೆಗೆ

ಕಳುಹಿಸಿದರು. ಚಾಂದ್‌ಬೀಬಿಯ ನೌಕರರು, ಚಾಕರರು, ಹೆಂಗಳೆಯರು, ಸೇವಕಿಯರು ಎದುರಿಗಿದ್ದಾಗಲೇ, ಹಾಡು ಹಗಲು ಬಜಾರದ ಮಧ್ಯ ಎಲ್ಲರೂ ನೋಡನೋಡುತ್ತಿದ್ದಂತೆ, ಬಾಯಿ ಮಾಡುತ್ತ ಅವಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಅಲಿ ಆದಿಲ್‌ಷಾಹನು ಕೊಲೆಯಾದಾಗಲೂ ಈ ರೀತಿಯ ಗದ್ದಲ, ರೋದನವಾಗಿರಲಿಲ್ಲ. ಅದಕ್ಕಿಂತ ಮಿಗಿಲಾಗಿ ಜನರು ಭುಗಿಲೆದ್ದರು. ಎಲ್ಲರೂ ಸಣ್ಣವರು, ದೊಡ್ಡವರು, ಎನ್ನದೆ ಕಿಶ್ವರಖಾನನಿಗೆ, ಛೀ ಥೂ, ಹಾಕುವವರೇ ನಗರದ ಎಲ್ಲ ಜನರು ಕಿಶ್ವರಖಾನನ ಹೆಂಡಿರು ಮಕ್ಕಳು ಕೂಡ ಓಣಿ ಓಣಿಗಳಲ್ಲಿ, ರಸ್ತೆರಸ್ತೆಗಳಲ್ಲಿ, ಬಜಾರುಗಳಲ್ಲಿ ಒದರಾಡುತ್ತಾ ಚೀರಾಡುತ್ತಾ ಕಿಶ್ವರಖಾನನನ್ನು ಬಯ್ಯುತ್ತಿದ್ದರು. 'ಇದು ಯಜೀದನ ಬಲಾತ್ಕಾರವಾಗಿದೆ. ಯಜೀದನು ಪೈಗಂಬರರ ಮೊಮ್ಮಗನನ್ನು ಕೊಂದಂತೆ, ಈತನು ಮುಸ್ತಫಾಖಾನನ್ನು ಕೊಲೆ ಮಾಡಿ ರಾಜಮಾತೆ ಚಾಂದ್‌ಬೀಬಿಯ ಮೇಲೆ ಬಲವಂತ ಮಾಡಿ ಅವಳನ್ನು ಜುಲುಮೆಯಿಂದ ಬಂಧಿಸಿದ್ದಾನೆ. ಇಡೀ ರಾಜ್ಯವನ್ನು ಬೆದರಿಕೆಯಲ್ಲಿ ಹಾಕಿದ್ದಾನೆ' ಎಂದು ಹೇಳಿಕೊಳ್ಳುತ್ತಿದ್ದರು. ಎಲ್ಲರೂ ಕೂಡಿಕೊಂಡು ಕಿಶ್ವರಖಾನನನ್ನು ಹಿಡಿದು ಕುದುರೆ ಶಿಕ್ಷೆಯನ್ನು ಕೊಡಬೇಕೆಂದು ಯೋಚಿಸುತ್ತಿದ್ದರು. ಒಂದು ವೇಳೆ ಕಿಶ್ವರಖಾನನು ಚಾಂದ್‌ಬೀಬಿಯನ್ನು ಮಧ್ಯ ರಾತ್ರಿ ಹಿಡಿದು, ಅರಮನೆಯಿಂದ ಹೊರಹಾಕಿ ಮುಂದಿನ ಬೆಳಗಾಗುವುದರೊಳಗೆ ಸಾತಾರೆಯ ಕೋಟೆಗೆ ಕಳುಹಿಸಿದ್ದರೆ, ಇಂಥ ಅಪಕೀರ್ತಿಯು ಬರುತ್ತಿರಲಿಲ್ಲ. ಇಂಥ ಗದ್ದಲವಾಗುತ್ತಿರಲಿಲ್ಲ. ಆದರೆ ಆತನ ಸೊಕ್ಕು ಆತನನ್ನು ಅಯೋಗ್ಯನನ್ನಾಗಿಸಿ, ದುರ್ನಿಮಿತ್ತಕ್ಕೆ ಪಾತ್ರನಾಗಿ ಮಾಡಿತು.

ಮುಸ್ತಾಫಖಾನನ ವಧೆ ಹಾಗೂ ಚಾಂದ್‌ಬೀಬಿಯನ್ನು ಸೆರಮನೆಗೆ ಕಳುಹಿಸಿದ ಎರಡೂ ಘಟನೆಗಳು ಕಿಶ್ವರಖಾನನ ಅವನತಿಗೆ ಕಾರಣಗಳಾದವು. ರಾಜಧಾನಿಯ ಜನರು ಇವುಗಳನ್ನು ಒಪ್ಪಲಿಲ್ಲ. ಬೀದಿ ಬೀದಿಗಳಲ್ಲಿ ಆತನ ವಿರುದ್ಧ ಮತ ಪ್ರದರ್ಶನ ನಡೆಯಿತು. ಇದರ ಸದುಪಯೋಗವನ್ನು ಪಡೆದು ಹಬಶೀ ಸರದಾರ ಇಕ್ಲಾಸ್‌ಖಾನನು ಕಿಶ್ವರಖಾನನ ವಿರುದ್ಧ ನಿಂತನು. ಕಿಶ್ವರಖಾನನಿಗೆ ಅವನ ವಿರುದ್ಧ ಗೆಲ್ಲುವುದು ಸಾಧ್ಯವಿಲ್ಲ ಎಂದು ಗೊತ್ತಿದ್ದರೂ ತನ್ನ ಮರ್ಯಾದೆಗೋಸ್ಕರ ಹಾಗೂ ದೊಡ್ಡಸ್ತಿಕೆಯನ್ನು ಉಳಿಸಿಕೊಳ್ಳಲು ಮೊದಲು ಅವನನ್ನು ಎದುರಿಸಲು ಬಂದನಾದರೂ ಇಕ್ಲಾಸ್‌ಖಾನನ ಮುಂದೆ ಆತನ ಆಟ ನಡೆಯಲಿಲ್ಲ. ಆದ್ದರಿಂದ ಧೈರ್ಯ ಮಾಡಿ ಬಹಳಷ್ಟು ಸಂಪತ್ತನ್ನು ತೆಗೆದುಕೊಂಡು ಆಭರಣ ಇತ್ಯಾದಿಗಳು ತುಂಬಿದ ಎರಡು ಮೂರು ಪೆಟ್ಟಿಗೆಗಳ ಸಹಿತವಾಗಿ, ನಿಜಾಮಷಾಹನ ರಾಜ್ಯಕ್ಕೆ ಓಡಿ ಹೋದನು. ಕಿಶ್ವರಖಾನು ಬರುವ ಮೊದಲೆ ಅಹಮದನಗರದ ಎಲ್ಲಾ ಸಣ್ಣ-ದೊಡ್ಡವರು ಆತನ ದುರ್ನಡತೆಯ ವಿಷಯ ಕೇಳಿ ಬಲ್ಲವರಾಗಿದ್ದರು. ಅಲ್ಲಿರಲಾರದೆ ಕಿಶ್ವರಖಾನನು ಕುತುಬ್‌ಷಾಹನ ರಾಜ್ಯಕ್ಕೆ ಹೋದನು. ಅಲ್ಲಿಯೂ ಈ ಅಪಕೀರ್ತಿಯ ಪ್ರಸದ್ಧಿಯಿಂದಾಗಿ ಬಾದಷಾಹನ ಹತ್ತಿರ ಹೋಗುವುದು ಆಗಲಿಲ್ಲ. ಅಲ್ಲಿ ಮುಸ್ತಫಾಖಾನನ ಕಡೆಯ ಆರ್ದಸ್ತಾನಿ ಮನುಷ್ಯನೊಬ್ಬನಿದ್ದನು. ಆತನು ಕಿಶ್ವರಖಾನನ ಮೇಲೆ ತಲವಾರಿನಿಂದ ಹೊಡೆದನು. ಆ ಹೊಡೆತದಿಂದ ತಲೆಯಿಂದ-ಕಾಲಿನವರೆಗೆ ಎರಡು ಭಾಗವಾಗಿ ಸತ್ತನು. ಕಿಶ್ವರಖಾನನ ದುರಾಡಳಿತ ಕೇವಲ ನಾಲ್ಕು ತಿಂಗಳು ಹನ್ನೆರಡು ದಿನಕ್ಕಷ್ಟೆ ಸೀಮಿತವಾಯಿತು.[8]

## ೪.೧.೩. ಮೂರನೆಯ ರೀಜೆಂಟನಾಗಿ ಇಕ್ಲಾಸ್‌ಖಾನ್

ಬಿಜಾಪುರನಲ್ಲಿ ಎರಡನೆಯ ಇಬ್ರಾಹಿಂ ಆದಿಲ್‌ಷಾಹನು ಸಿಂಹಾಸನವೇರಿದ ಏಳು ತಿಂಗಳುಗಳಲ್ಲಿ ಇಬ್ಬರು ರೀಜೆಂಟರುಗಳ ಬದಲಾವಣೆಯಾಯಿತು. ಕಿಶ್ವರಖಾನನ ದಮನದ ನಂತರ ಇಕ್ಲಾಸಖಾನನು ರಾಜ್ಯಸೂತ್ರಗಳನ್ನು ವಹಿಸಿಕೊಂಡ ತಕ್ಷಣ ಮೊದಲು ಮಾಡಿದ ಕೆಲಸವೆಂದರೆ, ಚಾಂದ್‌ಬೀಬಿಯನ್ನು ಬಿಡುಗಡೆ ಮಾಡಿ ಬಿಜಾಪುಕ್ಕೆ ಕರೆತಂದದ್ದು. ಮತ್ತೆ ಎಂದಿನಂತೆ ಇಬ್ರಾಹಿಂ ಆದಿಲ್‌ಷಾಹನು ರಾಜಮಾತೆಯ ಕಣ್ಣರಿಕೆಗೆ ಒಳಪಟ್ಟನು. ಇಕ್ಲಾಸ್‌ಖಾನನ ಆದಿಯಾಗಿ ಎಲ್ಲ ಹಬಶಿಗಳೂ ಚಾಂದ್‌ಬೀಬಿಗೆ ಮನ್ನಣೆ ಕೊಡುತ್ತಾ ರಾಜ್ಯಾಡಳಿತದ ಎಲ್ಲ ವಿಷಯಗಳಲ್ಲೂ ಅವಳ ಸಲಹೆಯನ್ನು ಪಡೆಯುತ್ತಿದ್ದರು. ಆದರೆ ಬುದ್ಧಿ ಕಲಿತ ಚಾಂದ್‌ಬೀಬಿಯು ಒಂದು ವರ್ಗದ ಜನರಿಗೆ ಪೂರ್ತಿ ಆಡಳಿತ ಕೊಡುವುದನ್ನು ಬದಲಿಸಿ ಇಕ್ಲಾಸ್‌ಖಾನನ ಜೊತೆಗೆ ರಾಜ್ಯದ ಆಡಳಿತದ ವಿಷಯಗಳಲ್ಲಿ ಅಫಜಲಖಾನ್ ಶಿರಾಜಿಯನ್ನು ಸಹಾಯಕ್ಕೆಂದು ನಿಯಮಿಸಿದಳು. ಅಫಜಲಖಾನ್ ಶಿರಾಜಿಯು ಹೊಸಬ-ಗರೀಬ ವರ್ಗಕ್ಕೆ ಸೇರಿದವನಾಗಿದ್ದನು. ಹೀಗೆ ಆಡಳಿತದಲ್ಲಿ ಎರಡೂ ವರ್ಗಗಳಿಗೆ ಅಧಿಕಾರವನ್ನು ನೀಡಿದಳು. ಅದು ಇಕ್ಲಾಸಖಾನನಿಗೆ ನುಂಗಲಾರದ ತುತ್ತಾಯಿತು.

ಈ ಮಧ್ಯ ದಖಣಿ ಜನರು ಮತ್ತು ಬೇರೆ ಸರದಾರರು ಐನುಲ್ ಮುಲ್ಕನಿಗೆ ಪ್ರಧಾನಿ ಪದವಿಯನ್ನು ಕೊಡಲು ಒಪ್ಪಿಕೊಂಡಿದ್ದರು. ನೌಕರರಲ್ಲಿ ತಮ್ಮೊಳಗಿನ ಒಬ್ಬರು ಪ್ರಧಾನಮಂತ್ರಿಯಾಗಬೇಕೆಂದು ಇಚ್ಛಿಸುತ್ತಿದ್ದರು. ಎಲ್ಲರೂ ತಮ ತಮಗೆ ಪ್ರಧಾನಿ ಪದವಿ ದೊರೆಯಬೇಕೆಂದು ಗದ್ದಲದಲ್ಲಿ ರಾಜ್ಯದ ಕೆಲಸಗಳು ಸೂಸುತ್ರವಾಗಿ ಜರುಗುತ್ತಿರಲಿಲ್ಲ. ಐನುಲ್-ಮುಲ್ಕನ ಹತ್ತಿರ ಸೈನ್ಯದ ಸಿದ್ಧತೆ ಇತ್ತು. ಅದರ ಬಲದಿಂದ ಒಂದು ದಿನ ಇಕ್ಲಾಸ್‌ಖಾನ, ಹಮೀದಖಾನ, ದಿಲಾವರಖಾನ ಹಬಶೀ ಮತ್ತು ಶಹರಾಬಖಾನ ತುರಕೀ ಈ ನಾಲ್ಕು ಜನರನ್ನು ಹಿಡಿದು ಬಂಧಿಸಿದನು. ಈ ನಾಲ್ವರ ಬಗ್ಗೆ ಆತನಿಗೆ ಭಯವಿರುವ ಕಾರಣವೆಂದರೆ, ಈ ಹಬಶೀತುರ್ಕೀ ಮತ್ತು ಹಿಂದೂಗಳನ್ನು ಸೇರಿಸಿದರೆ ಒಂದು ಸಾವಿರ ಶೂರ-ತರುಣ ಯೋಧರಾಗುತ್ತಿದ್ದರು. ಅಗತ್ಯ ಬಿದ್ದು ಕರೆದರೆ ಮತ್ತೆ ಮೂರು ನಾಲ್ಕು ಸಾವಿರ ತರುಣ ಯೋಧರು ಸಹಾಯಕ್ಕೆ ಬರುತ್ತಿದ್ದರಲ್ಲದೆ ಅವರ ಅಂಕಿತದಲ್ಲಿದ್ದ ಇನ್ನೂ ಹತ್ತು-ಹದಿನೈದು ಸಾವಿರ ಅಧಿಕ ಜನರು ಸೇರಬಹುದಾಗಿತ್ತು. ಆದ್ದರಿಂದ ಈ ಗುಂಪಿನ ಭಯದಿಂದ ಐನುಲ್-ಮುಲ್ಕನು ಮುಖ್ಯಸ್ಥರನ್ನೆಲ್ಲ ಬಂಧಿಸಿ ಇಡಲು ಇಚ್ಛಿಸುತ್ತಿದ್ದನು. ಮುಖ್ಯಸ್ಥರ ಗೈರುಹಾಜರಿಯಲ್ಲಿ ತಾನು ನಿರಾಯಾಸವಾಗಿ ಪ್ರಧಾನ ಪದವಿಯನ್ನು ಪಡೆದು ಪ್ರಬಲನಾಗಬಹುದು ಎಂಬುದು ಅವನ ಎಣಿಕೆಯಾಗಿತ್ತು.

ಆದರೆ ಮಕಸೂದಖಾನನು ಈ ನಾಲ್ಕು ಜನರನ್ನು ಐನುಲ್-ಮುಲ್ಕನ ಬಂಧನದಿಂದ ಬಿಡಿಸಿಕೊಂಡು ಬರುವಲ್ಲಿ ಯಶಸ್ವಿಯಾದನು. ದಖಣಿ, ಮತ್ತು ಹಬಶೀ ಜನರ ಮಧ್ಯೆ ಮತ್ತೊಮ್ಮೆ ರಾಜಧಾನಿಯಲ್ಲಿ ದಂಗೆಗಳಾದವು. ಈ ಮಧ್ಯೆ ಇಕ್ಲಾಸ್‌ಖಾನನು ಮತ್ತೆ ತನ್ನ ಅಧಿಕಾರವನ್ನು ಚಲಾಯಿಸತೊಡಗಿದನು. ಅವಕಾಶವನ್ನು ಉಪಯೋಗಿಸಿಕೊಂಡು ಅಫಜಲಖಾನನ್ನು ಬಂಧಿಸುವಲ್ಲಿ ಯಶಸ್ವಿಯಾದನು.

ಈ ದಂಗೆ ಹಾಗೂ ಗದ್ದಲಗಳ ಸಮಯದಲ್ಲಿ ಬಾದಷಾಹನು ಸ್ವತಃ ಚಾಂದ್‌ಬೀಬಿಯ ಮಹಲಿನಲ್ಲಿ ಕುಳಿತು ಅವಳೊಂದಿಗೆ ಈ ಸಂಕಟಗಳ ನಿವಾರಣೆಗಾಗಿ ಏನೆಲ್ಲ ಮಾಡಬೇಕೆಂದು ವಿಚಾರಿಸುತ್ತಿದ್ದನು. ಅಂಥ ವಿಷಯಗಳಲ್ಲಿ

ಚಾಂದ್‌ಬೀಬಿ ತುಂಬಾ ಬುದ್ಧಿವಂತಳಾಗಿದ್ದಳು. ಈ ಗದ್ದಲ ಮತ್ತು ದಂಗೆಗಳು ಪ್ರತಿಯೊಂದು ವಿಭಾಗಗಳಿಂದಲೂ ಉಂಟಾಗಿವೆಯೆಂಬುದನ್ನು ಅವಳು ತಿಳಿದುಕೊಂಡಳು. ಈ ನೌಕರರು ಕೆಲಸದ ಜಗ್ಗಾಟದಲ್ಲಿ ತಂತಮ್ಮ ಕಾರಭಾರವೇ ನಡೆಯಬೇಕೆಂದು ಇದೆಲ್ಲ ಪ್ರಾರಂಭಿಸಿದ್ದಾರೆ. ಅಮೀರ್ ಜನರು, ದಖಣಿಗಳು,ಮುಸಲ್ಮಾನರು ಇವರೆಲ್ಲ ಹಬಶೀ ಜಾತಿಯ ಜನರ ಆಜ್ಞೆಗಳನ್ನು ಒಪ್ಪುತ್ತಿಲ್ಲ. ಹಬಶೀ ಜನರ ಮಾತಿನ ಮೇಲೆ ವಿಶ್ವಾಸವನ್ನು ಇಡುವುದಿಲ್ಲ. ಶತ್ರುಗಳನ್ನು ಎದುರಿಸುವ ವಿಷಯದಲ್ಲಿ ಒಂದಾಗುತ್ತಿಲ್ಲ ಎಂಬುದನ್ನು ತಿಳಿದುಕೊಂಡ ಚಾಂದ್‌ಬೀಬಿಯು ಹಬಶೀ ಜಾತಿಯ ಅಮೀರ ಜನರನ್ನು ಏಕಾಂತದಲ್ಲಿ ಕರೆಸಿದಳು. ಅವರಿಗೆ ವಿವರಗಳನ್ನೆಲ್ಲ ಅವರ ಅಂತಃಕರಣಗಳು ತುಂಬಿ ಬರುವಂತೆ ತಿಳಿಹೇಳಿದಳು. ಅದನ್ನು ಕೇಳಿದ ಹಬಶೀ ಸರದಾರರು ಸಂಪೂರ್ಣ ಮನಸ್ಸಿನಿಂದ ಚಾಂದ್‌ಬೀಬಿಗೆ ಈ ರೀತಿ ಹೇಳಿದರು. "ತಮ್ಮ ಮನದಲ್ಲಿ ಯಾರಿಗೆ ಕಾರಭಾರವನ್ನು ಕೊಡುವುದು ಸರಿ ಎನಿಸುತ್ತದೆಯೋ ಅವರಿಗೆ ಕೊಡಿರಿ ಮತ್ತು ರಾಜ್ಯದ ಕೆಲಸಗಳನ್ನು ನಡೆಸಿರಿ"[೬] ಹೀಗೆ ಮೂವರೂ ತಮ್ಮ ಅಧಿಕಾರವನ್ನು ಬಿಟ್ಟುಕೊಟ್ಟರು.

### ೪.೧.೪. ರೀಜೆಂಟರಾಗಿ ಅಬುಲ್‌ಹಸನ್ ಮತ್ತು ದಿಲಾವರಖಾನ

ಬಿಜಾಪುರ ರಾಜ್ಯದ ರಾಜಕೀಯದಲ್ಲಿನ ಗೊಂದಲದ ವಾತಾವರಣ ಪರಿಸ್ಥಿತಿಯನ್ನು ಚಾಂದ್‌ಬೀಬಿಯು ತನ್ನ ಚಾಣಾಕ್ಷತನದಿಂದ ಬಗೆಹರಿಸಿದಳು. ಅಂದರೆ ಇಕ್ಲಾಸ್‌ಖಾನ ರೀಜೆಂಟನ ಆಡಳಿತದ ಅವಧಿಯಲ್ಲಿ ದಖ್ಖನಿ ಮತ್ತು ಹಬಶೀ ಜನರ ಮಧ್ಯೆ ಅಧಿಕಾರಕ್ಕಾಗಿ ಗೊಂದಲ ಸೃಷ್ಟಿಯಾಗಿದ್ದನ್ನು ಗಮನಿಸಿ ಚಾಂದ್‌ಬೀಬಿಯು ಉಪಾಯದಿಂದ ಇಕ್ಲಾಸ್‌ಖಾನನನ್ನು ಅಧಿಕಾರದಿಂದ ವಜಾಗೊಳಿಸಿ, ನಿಜಾಮ್‌ಷಾಹಿ ಸುಲ್ತಾನನ ಗುರು ಷಾಹ ತಾಹಿರನ ಮಗ ಷಾಹ ಅಬುಲ್‌ಹಸನ್‌ನನ್ನು ಕರೆಸಿ ಆತನಿಗೆ ರೀಜೆಂಟನ ಹುದ್ದೆಯನ್ನು ಕೊಟ್ಟಳು. ಅಬುಲ್‌ಹಸನ್‌ನು ಸ್ವಲ್ಪ ದಿನಗಳಲ್ಲಿ ರಾಜ್ಯದ ಒಳಗೆ ಮತ್ತು ಹೊರಗೆ ಇದ್ದ ಅಶಾಂತಿಯನ್ನು ನಿಯಂತ್ರಿಸುವಲ್ಲಿ ಸಫಲನಾದನು.

ಇಕ್ಲಾಸ್‌ಖಾನನ ಆಡಳಿತದ ಅವಧಿಯಲ್ಲಿ ಬಂಧನದಲ್ಲಿದ್ದ ಅಫಜಲ್‌ಖಾನ ಶಿರಾಜಿ ಬಗ್ಗೆ ಜನರಲ್ಲಿ ಅನುಕಂಪ ಇದೆ ಎಂಬುದು ಶಾಹ ಅಬುಲ್‌ಹಸನನಿಗೂ ಗೊತ್ತಿತ್ತು. ಅದರಿಂದಾಗಿ ರಾಜ್ಯದಲ್ಲಿ ಗಲಭೆಗಳು ದಂಗೆಗಳು ಉಂಟಾಗುತ್ತಿದ್ದವು. ಅದರ ಉಪಯೋಗವನ್ನು ಹಬಶೀ ಜನರೂ ತೆಗೆದುಕೊಳ್ಳಲು ಹವಣಿಸುತ್ತಿದ್ದರು. ಆದರಿಂದಾಗಿ ಅಫಜಲ್‌ಖಾನನನ್ನು ಕೊಲ್ಲದ ಹೊರತು ತಾನು ಸುವ್ಯವಸ್ಥೆವಾಗಿ ರಾಜ್ಯಕಾರಭಾರವನ್ನು ಮಾಡುವುದು ಸಾಧ್ಯವಿಲ್ಲ ಎಂದು ಅಬುಲ್‌ಹಸನ್‌ಷಾಹನು ತೀರ್ಮಾನಿಸಿದನು. ಅಫಜಲ್‌ಖಾನ ಸಿರಾಜಿ ಮತ್ತು ಅವನ ಸಹೋದರ ರಫೀಯುದ್ದೀನ್ ಶಿರಾಜಿಯನ್ನು ಮುಗಿಸಿಬಿಡುವುದೆಂದು ಕೊಂಡನು. ಅದರಂತೆ ರಫೀಯುದ್ದೀನ್‌ನನ್ನೂ ಬಂಧಿಸಿ ಸೆರೆಮನೆಗೆ ತಂದನು. ಆಗಲೇ ಅಲ್ಲಿದ್ದ ಅಫಜಲ್‌ಖಾನನನ್ನು ಅವನ ಸಹೋದರನ ಎದುರಿಗೆ ಕೊಲೆ ಮಾಡಿದರು.[೭] ರಫೀಯುದ್ದೀನನ್ನು ಕೊಲ್ಲಬೇಕು ಎನ್ನುವಷ್ಟರಲ್ಲಿ ಬಾದಷಹನಿಗೆ ವಿಷಯ ಗೊತ್ತಾಗಿ ಅವನ ಕೃಪೆಯಿಂದ ರಫೀಯುದ್ದೀನನ ಜೀವ ಉಳಿಯಿತು. ಅನಂತರ ಅವನು ೩೦ ವರ್ಷಗಳ ಕಾಲ ಎರಡನೇ ಇಬ್ರಾಹಿಂ ಆದಿಲ್‌ಷಾಹನ ಸೇವೆಯಲ್ಲಿದ್ದನು.

ಹಬಶೀ ಅಮೀರರಾದ ಇಕ್ಲಾಸ್‌ಖಾನ, ಹಮೀದಖಾನ ಮತ್ತು ದಿಲಾವರಖಾನರು ಅಬುಲ್ ಹಸಾನೊಂದಿಗೆ ಒಂದುಗೂಡಿ ರಾಜ್ಯಕಾರಭಾರವನ್ನು ಮಾಡಲಾರಂಭಿಸಿದರು. ಅದು ಬಹಳ ದಿನ ನಡೆಯಲಿಲ್ಲ. ಹಬಶೀ ಜನರನ್ನು ಬಂಧಿಸಿ ತಾನೇ ಸರ್ವಾಧಿಕಾರಿಯಾಗಬೇಕೆಂದು ಅಬುಲ್ ಹಸನನು ಅವಕಾಶಕ್ಕಾಗಿ ಕಾಯುತ್ತಿದ್ದರೆ, ಹಬಶೀ ಜನರೂ ಅಬುಲ್‌ಹಸನ್‌ನನ್ನು ಬಂಧಿಸಬೇಕೆಂದಿದ್ದರು. ಕೊನೆಗೆ ಹಬಶೀ ಜನರ ಕೈ ಮೇಲಾಗಿ ಅಬುಲ್‌ಹಸನನು ಬಂಧಿಸಲ್ಪಟ್ಟನು. ತಾವೇ ರಾಜ್ಯಾಡಳಿತದ ಸೂತ್ರಗಳನ್ನು ಹಿಡಿದರು. ಮೂವರು ಹಬಶೀ ಅಮೀರರಲ್ಲಿ ದಿಲಾವರಖಾನನ್ನು ಬಹಳ ಬುದ್ಧಿವಂತನಾಗಿದ್ದನು. ಸಂಭಾವಿತ, ವೃದ್ಧ, ಒಳ್ಳೆಯ ಬರಹಗಾರನೂ ಆಗಿದ್ದನು. ಅಂತೂ ಮೂವರೂ ಕೂಡಿ ತಂತಮ್ಮಲ್ಲಿ ಬಿಜಾಪುರ ರಾಜ್ಯವನ್ನು ಮೂರು ಭಾಗಗಳನ್ನಾಗಿ ಮಾಡಿ ಹಂಚಿಕೊಂಡು ಎರಡು ವರ್ಷಗಳವರೆಗೆ ರಾಜ್ಯವಾಳಿದರು.

ಈ ಸಮಯದಲ್ಲಿ ಗೋಲ್ಕೊಂಡದ ಮಹಮ್ಮದ ಕುಲಿ ಕುತುಬ್‌ಷಾಹನು ಆದಿಲ್‌ಷಾಹನ ಗಡಿ ಪ್ರದೇಶದಲ್ಲಿ ಲೂಟಿ ದಂಗೆಗಳನ್ನು ನಡೆಸಲಾರಂಭಿಸಿದನು. ಇಕ್ಲಾಸ್‌ಖಾನನ ಸಲಹೆಯಂತೆ ಬಾದಷಹನು ದಿಲಾವರಖಾನನನ್ನು ಸೇನಾಪತಿಯನ್ನಾಗಿ ಮಾಡಿ ಮಹಮ್ಮದ ಕುಲಿ ಕುತುಬ್‌ಷಾಹನನನ್ನು ದಂಡಿಸಲು ಕಳಿಸಿಕೊಟ್ಟನು. ದಿಲಾವರಖಾನನು ಕುತುಬ್‌ಷಾಹನನ್ನು ಯಶಸ್ವಿಯಾಗಿ ಎದುರಿಸಿದನು. ಆತನನ್ನು ಹಿಮ್ಮೆಟ್ಟಿಸಿ ತಿರುಗಿ ಬಂದಾಗ ಅಧಿಕಾರದಲ್ಲಿ ಅಧಿಕ ಪಾಲನ್ನು ಬೇಡಿದನು. ಇಕ್ಲಾಸ್‌ಖಾನನು ಅಬುಲ್ ಹಸನ್ ಷಾಹನೊಂದಿಗೆ ಅನುಕೂಲವಾಗುವಂತೆ ವರ್ತಿಸುತ್ತಿದ್ದುದು ದಿಲಾವರಖಾನನಿಗೂ ಆತನ ಸಹಯೋಗಿ ಹಮೀದ್‌ಖಾನನಿಗೂ ಸರಿ ಬರಲಿಲ್ಲ. ಯಾಕೆಂದರೆ ಇಕ್ಲಾಸ್‌ಖಾನನು ಈ ಉಭಯ ಬಣದವನಾಗಿರಲಿಲ್ಲ. ಆದ್ದರಿಂದ ಈ ದ್ವಂದ್ವ ನೀತಿಯ ರಾಜಕಾರಣವನ್ನು ದಿಲಾವರಖಾನ ಹಾಗೂ ಹಮೀದ್‌ಖಾನರು ಬಹಿರಂಗವಾಗಿಯೇ ಟೀಕಿಸಿದರು. ಮತ್ತೆ ರಾಜಧಾನಿಯಲ್ಲಿ ಉದ್ವಿಗ್ನತೆ ಮುಂದುವರಿಯಿತು. ಎರಡು ತಿಂಗಳುಗಳು ಕಳೆಯುವಷ್ಟರಲ್ಲಿ ದಿಲಾವರಖಾನನು ಸಂಪತ್ತು ಆಮಿಷಗಳ ಆಸೆಯನ್ನು ರಾಜಧಾನಿಯಲ್ಲಿಯ ಸೈನ್ಯ ತೋರಿಸಿ ಇಕ್ಲಾಸ್‌ಖಾನನನ್ನು ತೊರೆದು ತನ್ನ ಹತ್ತಿರ ಬಂದು ಕೂಡಿಕೊಳ್ಳುವಂತೆ ಮಾಡಿದನು. ಈ ವಿಷಯ ತಿಳಿದು ಇಕ್ಲಾಸ್‌ಖಾನನು ದಿಲಾವರಖಾನನೊಂದಿಗೆ ಒಪ್ಪಂದ ಮಾಡಿಕೊಳ್ಳಲು ಸಿದ್ಧನಾದನು. ಒಪ್ಪಂದದ ಕರಾರುಗಳನ್ನು ಸಿದ್ಧಪಡಿಸಲು ಇಕ್ಲಾಸ್‌ಖಾನನು ದಿಲಾವರಖಾನನ ಮನೆಗೆ ಬಂದಾಗ ಆತನನ್ನು ದಿಲಾವರಖಾನನ ಜನರು ಸೆರೆ ಹಿಡಿದರು. ಅನಂತರ ಆತನ ಜೊತೆಗಾರ ಅಬುಲ್‌ಹಸನ್‌ನನ್ನು ಸೆರೆಹಿಡಿದು ಕುರುಡನನ್ನಾಗಿ ಮಾಡಿದರು. ಮತ್ತೆ ಕೆಲದಿನಗಳಲ್ಲಿ ಆತನನ್ನು ಕೊಂದರು.

ದಿಲಾವರಖಾನ ಹಾಗೂ ಹಮೀರ್‌ಖಾನರು ಈಗ ರಾಜ್ಯದ ಪ್ರಮುಖರಾದರು. ಕೆಲವು ದಿನಗಳವರೆಗೆ ಒಗ್ಗಟ್ಟಿನಿಂದ ಕೆಲಸ ಮಾಡುತ್ತಿದ್ದರು. ಆದರೆ ಹಮೀದ್‌ಖಾನನನ್ನು ರಾಜ್ಯದ ಮುಖ್ಯ ಸೇನಾಧಿಪತಿಯನ್ನಾಗಿ ಮಾಡದೆ ದಿಲಾವರಖಾನನು ತನ್ನ ಮಗನನ್ನೇ ಆ ಸ್ಥಳಕ್ಕೆ ಕರೆ ತಂದನು. ಅಧಿಕಾರ ಎನ್ನುವುದು ಎಂತಹ ಮಾದಕ ವಸ್ತುವೆಂದರೆ ವಿವೇಕವನ್ನು ಪೂರ್ತಿ ಆವಿಯಾಗಿಸಿ ಬಿಡುತ್ತದೆ. ಅವನ ಸಹೋದ್ಯೋಗಿ ಹಮೀದ್‌ಖಾನನನ್ನು ಸಹಿಸಿಕೊಳ್ಳಲಾಗಲಿಲ್ಲ. ಇದನ್ನು ಅರಿತು ದಿಲಾವರಖಾನನು ಇನ್ನೂ ಮುಂದೆ ಹೋಗಿ ಹಮೀದ್‌ಖಾನನನ್ನು ಹಿಡಿದು ಸಾತಾರೆಯ ಸೆರೆಮನೆಯಲ್ಲಿ ಇಟ್ಟನು. ಈಗ ದಿಲಾವರಖಾನನು ಬಿಜಾಪುರದ ಸರ್ವಾಧಿಕಾರಿಯಾದನು.

ದಿಲಾವರಖಾನನು ತನ್ನ ಅಧಿಕಾರವನ್ನು ದುರುಪಯೋಗಗೊಳಿಸಲಿಲ್ಲ. ಕಟ್ಟುನಿಟ್ಟಿನ ಆಡಳಿತದಿಂದ ರಾಜ್ಯವನ್ನು ನಡೆಸಿದನು. ಆತ ರಾಜ್ಯದ ಒಳ ಹೊರಗೆ ಶಾಂತಿಯನ್ನು ತರಲು ಯತ್ನಿಸಿದನು. ಆತ ಮೊದಲು ಸಮರ್ಥ ಸೈನ್ಯವನ್ನು ಕಳುಹಿಸಿ ದಕ್ಷಿಣದಲ್ಲಿ ಬಂಡೆದ್ದ ನಾಯಕರ ದಂಗೆಯನ್ನು ದಮನ ಮಾಡಿ ಮತ್ತೆ ಆ ಪ್ರದೇಶಗಳನ್ನು ತಿರುಗಿ ಆದಿಲ್‌ಷಾಹನ ನಿಯಂತ್ರಣಕ್ಕೆ ಒಳಪಡಿಸಿದನು. ಅನಂತರ ಅಹಮದನಗರ ಹಾಗೂ ಗೋಲ್ಕೊಂಡಗಳೊಂದಿಗೆ ಸ್ನೇಹ ಹಸ್ತವನ್ನು ಚಾಚಿದನು. ಎರಡನೇ ಇಬ್ರಾಹಿಂ ಆದಿಲ್‌ಷಾಹನ ತಂಗಿ ಖದೀಜಾ ಸುಲ್ತಾಳನ್ನು ಅಹಮದನಗರದ ಮುರ್ತುಜಾ ನಿಜಾಮ ಷಾಹನ ಮಗ ಮೀರ್ಹೈನ್ ಹುಸೇನಷಾಹನೊಂದಿಗೆ ಹಾಗೂ ಗೋಲ್ಕೊಂಡದ ಮಹಮ್ಮದ ಕುಲಿ ಕುತುಬ್‌ಷಾಹನ ತಂಗಿಯೊಂದಿಗೆ ಸ್ವಂತ ಬಾದಷಹ ಇಬ್ರಾಹಿಂ ಆದಿಲ್‌ಷಾಹನ ಜೊತೆಗೆ ಮದುವೆಗಳ ಪ್ರಸ್ತಾಪ ಮಾಡಿದರು. ಈ ವೈವಾಹಿಕ ಸಂಬಂಧಗಳಿಂದ ಗಡಿ ಪ್ರದೇಶಗಳಲ್ಲಿ ನಡೆಯುತ್ತಿರುವ ಯುದ್ಧಗಳನ್ನು ಸ್ವಲ್ಪ ಸಮಯದವರಿಗೆ ಸ್ಥಗಿತಗೊಳಿಸಬಹುದು ಎಂದು ಯೋಚಿಸಿದನು ಮತ್ತು ಬಿಜಾಪುರದ ರಾಜ್ಯ ರಾಜಕೀಯದಲ್ಲಿ ರೀಜೆಂಟರಿಗಾಗಿ ನಡೆಯುತ್ತಿದ್ದ ದಂಗೆಗಳನ್ನು ಸಂಪೂರ್ಣವಾಗಿ ಹತ್ತಿಕ್ಕಿದನು. ಬಿಜಾಪುರದ ಆಡಳಿತವನ್ನು ಸುವ್ಯವಸ್ಥೆಯಿಂದ ನಡೆಸಿಕೊಂಡು ಹೋಗುವಲ್ಲಿ ಯಶಸ್ವಿಯಾದನು.

**೪.೨. ಬಿಜಾಪುರದಿಂದ ಅಹಮದನಗರಕ್ಕೆ ಆಗಮನ**

ಇತಿಹಾಸಕಾರರಿಂದ ರಫೀವುದ್ದೀನ್ ಶಿರಾಜ್ ಮತ್ತು ಇಬ್ರಾಹಿಂ ಝುಬೈರಿಯ ಉಲ್ಲೇಖದಂತೆ ಚಾಂದ್‌ಬೀಬಿಯು ಅಲಿ ಆದಿಲ್‌ಷಾಹನ ಜೊತೆ ಮದುವೆ ಆದ ಮೇಲೆ ಅವಳು ಹಿಜರಿಶಕಂತೆ ೯೯೨ ಏ.ಹೆಚ್ (೧೫೮೪)ರವರೆಗೆ ಬಿಜಾಪುದಿಂದ ಅಹಮದನಗರಕ್ಕೆ ಹಿಂತಿರುಗಿ ಹೋಗಲಿಲ್ಲ.[೯] ಎಂದು ಎಸ್.ಎ. ಖಾದ್ರಿಯವರು ''ಮೆಮೋಯರ್ಸ್ ಆಫ್ ಚಾಂದ್‌ಬೀಬಿ'' ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಚಾಂದ್‌ಬೀಬಿಗೆ ಕ್ರಿ.ಶ. ೧೫೮೪ರವರೆಗೆ ತಮ್ಮ ಕೃತಿಯಲ್ಲಿ ಅಹಮದನಗರಕ್ಕೆ ಹೋಗಲು ಅವಕಾಶವು ಕೂಡ ದೊರೆಯಲಿಲ್ಲ. ಎರಡನೇ ಇಬ್ರಾಹಿಂ ಆದಿಲ್‌ಷಾಹನ ಕಾಲದಲ್ಲಿ ಅಹಮದನಗರಕ್ಕೆ ಹೋಗಲು ಅವಕಾಶ ದೊರೆಯಿತು.

ಕ್ರಿ.ಶ. ೧೫೮೨ರಲ್ಲಿ ಬಿಜಾಪುರದ ರಾಜ್ಯ ರಾಜಕೀಯದಲ್ಲಿ ಕೆಲವೊಂದು ಬದಲಾವಣೆ ಮಾಡಲು ಚಾಂದ್‌ಬೀಬಿಯು ಬಯಸಿದಳು. ಇದಕ್ಕೆ ಅಧಿಕಾರಕ್ಕಾಗಿ ನಡೆಯುತ್ತಿದ್ದ ಕಲಹಗಳೇ ಕಾರಣ. ಅದಕ್ಕಾಗಿ ಈ ಸಮಯದಲ್ಲಿ ದಿಲಾವರಖಾನನನ್ನು ರೀಜೆಂಟನಾಗಿ ಮಾಡಲು ಬಯಸಿದಳು. ಏಕೆಂದರೆ ಬಿಜಾಪುರದಲ್ಲಿ ದಿಲಾವರಖಾನನು ಅತ್ಯಂತ ಚಾಣಾಕ್ಷ ಹಾಗೂ ನಿಷ್ಠವಂತ ನೋಬೆಲ್ಸ್ (ಶ್ರೀಮಂತ) ವರ್ಗಕ್ಕೆ ಸೇರಿದವನಾಗಿದ್ದನು. ಆದರೆ ಆ ಹೊತ್ತಿಗಾಗಲೇ ರಾಜಕೀಯದಲ್ಲಿ ರೀಜೆಂಟರಿಗಾಗಿ ನಡೆಯುತ್ತಿರುವ ದಂಗೆಗಳಿಂದ ಬಿಜಾಪುರದ ಆಡಳಿತವು ದುರ್ಬಲಗೊಂಡಿತ್ತು ಮತ್ತು ಬಿಜಾಪುರವು ಕಲಹಗಳ ಕೇಂದ್ರವೇ ಆಗಿಹೋಗಿತ್ತು. ಆ ಸಮಯದಲ್ಲಿ ನಿಷ್ಠಾವಂತ ಅಧಿಕಾರಿಯ ನೇಮಕ ಮಾಡುವುದು ಚಾಂದ್‌ಬೀಬಿ ಮತ್ತು ಸುಲ್ತಾನನಿಗೆ ಅನಿವಾರ್ಯವೂ ಹಾಗೂ ಅವಶ್ಯಕತೆಯೂ ಆಗಿತ್ತು. ಆದಕಾರಣ ಎರಡನೇ ಇಬ್ರಾಹಿಂ ಆದಿಲ್‌ಷಾಹನು ಕ್ರಿ.ಶ. ೧೫೮೨ರಲ್ಲಿ ದಿಲಾವರಖಾನನ್ನು ತನ್ನ ರೀಜೆಂಟನಾಗಿ ನೇಮಿಸಲಾಯಿತು. ಇವನು ತನ್ನ ಚಾಣಾಕ್ಷತನದಿಂದ ರಾಜ್ಯದ ಆಂತರಿಕ ಗಲಭೆಯನ್ನು ದಮನ ಮಾಡಿ ಅಧಿಕಾರದ ಬಲದಿಂದ ಆಡಳಿತವನ್ನು ನಿಯಂತ್ರಣದಲ್ಲಿಟ್ಟುಕೊಂಡನು. ರಾಜ್ಯದಲ್ಲಿ

ಗಲಭೆಗಳಾಗದಂತೆ ನೋಡಿಕೊಂಡನಲ್ಲದೆ, ಅಹಮದನಗರ ಮತ್ತು ಗೋಲ್ಕೊಂಡ ನೆರೆ ರಾಜ್ಯಗಳು ಗಡಿ ಪ್ರದೇಶಗಳ ಮೇಲಿನ ದಾಳಿಯನ್ನು ನಿಯಂತ್ರಣ ಮಾಡುವುದಕ್ಕಾಗಿ ಆ ರಾಜ್ಯಗಳೊಂದಿಗೆ ವೈವಾಹಿಕ ಸಂಬಂಧ ಬೆಳೆಸಲು ಪ್ರಯತ್ನಿಸಿದನು. ಬಿಜಾಪುರದ ಎರಡನೇ ಇಬ್ರಾಹಿಂ ಆದಿಲ್‌ಷಾಹನ ಸೋದರಿ ಖದೀಜಾ ಸುಲ್ತಾನಾ ಮುರ್ತುಜಾ ಹುಸೇನ್‌ಷಾಹನ ಮಗ ಮೀರ್ರೈನ ಹುಸೇನನನ್ನು ಮದುವೆಯಾಗುವುದು ಹಾಗೂ ತರುಣ ಇಬ್ರಾಹಿಂನು ಗೋಲ್ಕೊಂಡದ ಮಹಮ್ಮದ್ ಕುಲೀ ಕುತುಬ್‌ಷಾಹನ ಮಗಳು ಚಾಂದ್‌ಬೀಬಿ ಸುಲ್ತಾನಾಳನ್ನು ಮದುವೆಯಾಗುವುದು ಎಂದು ನಿರ್ಧಾರವಾಯಿತು. ಈ ಎರಡೂ ರಾಜ್ಯಗಳು ಮೊದಲಿನಿಂದಲೂ ಆದಿಲ್‌ಷಾಹಿಗಳ ರಕ್ತ ಹೀರಲು ಕಾತರಿಸುತ್ತಿದ್ದವು. ಆದ್ದರಿಂದ ಈ ವೈವಾಹಿಕ ಸಂಬಂಧವು ಧೀರ್ಘಕಾಲಿಕ ವೈಮನಸ್ಯವನ್ನು ನಂದಿಸಬಹುದು ಎಂದು ದಿಲಾವರಖಾನನು ಆಶಿಸಿದನು. ಅದರಂತೆ ಮೊದಲು ಅಹಮದನಗರದ ಮಿರ್ರೈನ್ ಹುಸೇನ್‌ನ ಜೊತೆ ಬಿಜಾಪುರದ ಖದೀಜಾ ಸುಲ್ತಾನಾ ಜೊತೆ ವಿವಾಹವಾಗುವುದು ಎಂದು ಎರಡು ರಾಜ್ಯಗಳ ಸುಲ್ತಾನರು ಆನಂದದಿಂದ ಒಪ್ಪಿಗೆ ನೀಡಿದರು. ಅಹಮದನಗರದಿಂದ ಖಾಸಿಂಬೇಗ್‌ನ ಮಗ ಅಹಮದ್‌ಬೇಗ್ ಬುಜುರ್ಗ್ ಮತ್ತು ಮಿರ್ಜಾ ತಾಕಿ ಇಬ್ಬರು ಬಿಜಾಪುರಕ್ಕೆ ೪೦೦ ಜನರೊಂದಿಗೆ ವಧುವನ್ನು ಕರೆದುಕೊಂಡು ಹೋಗಲು ಬಂದಿದ್ದರು. ವರನ ಸಂಬಂಧಿಕರು ಶಹಾಪುರದಲ್ಲಿ ಉಳಿದುಕೊಂಡಿದ್ದರು. ಮದುವೆಯ ಸಮಾರಂಭವು ಸತತವಾಗಿ ನಾಲ್ಕು ತಿಂಗಳವರೆಗೆ ವಿಜೃಂಭಣೆಯಿಂದ ನೆರವೇರಿತು. ನಂತರ ವಧುವನ್ನು ಅಹಮದನಗರಕ್ಕೆ ಕರೆತರಲಾಯಿತು. ನಂತರ ಎರಡನೇ ಇಬ್ರಾಹಿಂ ಆದಿಲ್‌ಷಾಹನು ಗೋಲ್ಕೊಂಡದ ಮಹಮ್ಮದ ಕುಲಿ ಕುತುಬ್‌ಷಾಹನ ಮಗಳು ಚಾಂದ್‌ಬೀಬಿ ಸುಲ್ತಾನಾಳ ಮದುವೆ ಕೂಡ ವಿಜೃಂಭಣೆಯಿಂದ ನಡೆಯಿತು. ರಾಜಮಾತೆ ಚಾಂದ್‌ಬೀಬಿಯು ಇದೆಲ್ಲವನ್ನೂ ಸಹನೆಯಿಂದ ಗಮನಿಸುತ್ತಾ ಕುಳಿತಿದ್ದಳು. ತರುಣ ಸುಲ್ತಾನನನ್ನು ಸರಿಯಾದ ರೀತಿಯಲ್ಲಿ ಬೆಳೆಸಿ ಅವನಿಗೆ ತರಬೇತಿ ಕೊಟ್ಟು ಮುಂದಿನ ಜೀವನದಲ್ಲಿ ಅವನು ಜಾಗರೂಕತೆಯಿಂದ ಬದುಕಲು ಅನುಕೂಲ ಮಾಡಿಕೊಡುವ ಉದ್ದೇಶವನ್ನು ಸಾಧಿಸುತ್ತಿದ್ದಳು. ಈ ಕಾರ್ಯವನ್ನು ಪೂರೈಸಿದ ಮೇಲೆ ಚಾಂದ್‌ಬೀಬಿಗೆ ತನ್ನ ಪ್ರತಿಭೆಯನ್ನು ವ್ಯಕ್ತಪಡಿಸಲು ಬಿಜಾಪುರವು ಸರಿಯಾದ ಸ್ಥಳವಲ್ಲ ಎಂದು ಯೋಚಿಸಿ ತನ್ನ ತವರುಮನೆಯಾದ ಅಹಮದನಗರವೇ ಸರಿ ಎಂದು ಭಾವಿಸಿ ಇತ್ತೀಚೆಗೆ ಮೀರ್ರೈನ್ ಹುಸೇನನನ್ನು ಮದುವೆಯಾದ ಖದೀಜಾ ಸುಲ್ತಾನಾಳ ಸಂಗಡ ಹೋಗುವ ನೆಪದಿಂದ ಅಹಮದನಗರಕ್ಕೆ ಹೋದಳು.

### ೪.೩. ಅಹಮದನಗರದ ಸಿಂಹಾಸನಕ್ಕಾಗಿ ಹೋರಾಟಗಳು

ಚಾಂದ್‌ಬೀಬಿಯು ಬಿಜಾಪುರದ ರಾಜಕೀಯದಲ್ಲಿ ರೀಜೆಂಟರಿಗಾಗಿ ನಡೆಯುತ್ತಿರುವ ದಂಗೆಗಳಿಂದ ಬೇಸರಗೊಂಡು ಬಿಜಾಪುರದಿಂದ ಅಹಮದನಗರಕ್ಕೆ ಹೋಗಲು ತೀರ್ಮಾನಿಸಿದಳು. ಆ ಸಮಯದಲ್ಲಿ ಎರಡನೇ ಇಬ್ರಾಹಿಂ ಆದಿಲ್‌ಷಾಹನು ಬಿಜಾಪುರದಲ್ಲಿನ ಆಡಳಿತ ನಡೆಸಲು ಸಮರ್ಥನಾಗಿದ್ದನು ಹಾಗೂ ಅತ್ಯಂತ ನಿಷ್ಠಾವಂತ ಹಾಗೂ ಚಾಣಾಕ್ಷನಾದ ದಿಲಾವರಖಾನನ್ನು ತನ್ನ ಪ್ರಧಾನಮಂತ್ರಿಯನ್ನಾಗಿ ನೇಮಿಸಿಕೊಂಡಿದ್ದನು. ಇದರಿಂದ ಬಿಜಾಪುರದಲ್ಲಿ ಅಧಿಕಾರ ಕ್ಷೀಣಿಸುತ್ತಿರುವುದನ್ನು ಗಮನಿಸಿ ಚಾಂದ್‌ಬೀಬಿಯು ಅಹಮದನಗರಕ್ಕೆ ಬಂದಳು.

ಚಾಂದ್‌ಬೀಬಿ ಅಹಮದನಗರಕ್ಕೆ ಹೋದದ್ದು ಇನ್ನೂ ಹೆಚ್ಚಿನ ದುರ್ಘಟನೆಗಳಿಗೆ ಕಾರಣವಾಯಿತು. ಕಿರೀಟ ಧರಿಸಲು ಬಯಸುವ ವ್ಯಕ್ತಿಗಳು ಮಾನವ ಸ್ವಭಾವದ ವಿಕೃತ ಮುಖವನ್ನು ಎಷ್ಟು ಕ್ರೂರವಾಗಿ ಪ್ರದರ್ಶಿಸುತ್ತಾರೆನ್ನುವುದಕ್ಕೆ ಮುರ್ತುಜಾನ ವರ್ತನೆ ಉತ್ತಮ ಉದಾಹರಣೆಯಾಗಿದೆ. ಅವನು ತನ್ನಲ್ಲಿ ಮಂತ್ರಿಯಾಗಿದ್ದು ತುಂಬಾ ಪ್ರಾಮಾಣಿಕನೆನಿಸಿದ್ದ ಚಿಂಗೀಜ್‌ಖಾನನಿಗೆ ಕೊಟ್ಟ ಕ್ರೂರ ಹಾಗೂ ಅಮಾನುಷ ಶಿಕ್ಷೆಯು ಅತ್ಯಂತ ಖಂಡನಾರ್ಹವಾಗಿತ್ತು. ಚಿಂಗೀಜ್‌ಖಾನನು ತನ್ನಿಂದ ಸ್ವತಂತ್ರನಾಗಿ ಬಿರಾರಿನ ಸುಲ್ತಾನನಾಗಲು ಪ್ರಯತ್ನ ಪಡುತ್ತಿದ್ದಾನೆಂಬ ಒಂದು ಸುಳ್ಳು ಆಪಾದನೆಯನ್ನು ಅವನ ಮೇಲೆ ಹೋರಿಸಿ ಮುರ್ತುಜಾ ಅವನನ್ನು ವಿಷ ಕೊಟ್ಟು ಸಾಯಿಸಿದನು. ಈ ದುಷ್ಟ ಅಭಿಪ್ರಾಯವು ರಾಜನ ಅಚ್ಚುಮೆಚ್ಚಿನವನಾಗಿದ್ದ ಸಾಹಿಬ್‌ಖಾನನಿಂದ ಮೆಲ್ಲಮೆಲ್ಲನೆ ನುಸುಳಿತು. ಅವನಿಗೆ ಮಂತ್ರಿಯ ಮೇಲೆ ಇದ್ದ ದ್ವೇಷ ಅಸೂಯೆಗಳನ್ನು ತೀರಿಸಿಕೊಳ್ಳಲು ಒಂದು ಒಳ್ಳೆಯ ಅವಕಾಶ ಬೇಕಾಗಿತ್ತು. ಸುಲ್ತಾನನು ಸತ್ಯವೇನೆಂದು ಖಚಿತಪಡಿಸಿಕೊಳ್ಳುವ ವೇಳೆಗೆ ಕಾಲ ಮಿಂಚಿ ಹೋಗಿ, ಚಿಂಗೀಜ್‌ಖಾನನು ಮೃತನಾಗಿದ್ದ.[೧೧] ಈ ಪ್ರಸಂಗವು ಬಹಮನಿ ರಾಜ್ಯದ ಪ್ರಸಿದ್ಧ ಮಂತ್ರಿಯಾಗಿದ್ದ ಮಹಮೂದ್ ಗವಾನನ ವಿರುದ್ಧ ಹಿಂದೆ ನಡೆದ ವಿಶ್ವಾಸಘಾತಕ ಒಳಸಂಚನ್ನು ನೆನಪಿಗೆ ತರುತ್ತದೆ.

ಮುರ್ತುಜಾ ತನ್ನ ಜೀವಿತದ ಕೊನೆಯ ವರ್ಷಗಳಲ್ಲಿ ತನ್ನ ಮಾನಸಿಕ ಸಮಸ್ಥಿತಿಯನ್ನು ಕಳೆದುಕೊಂಡಿದ್ದನು. ಕಾರಣ ಅವನಿಗೆ ಬಹುಕಟುವಾಗಿದ್ದ ತನ್ನ ಮಗ ಮೀರ್‍ಯನ್ ಹುಸೇನನು ತನ್ನನ್ನು ಪದಚ್ಯುತನನ್ನಾಗಿ ಮಾಡಿ ತಾನೇ ಆಡಳಿತ ವಹಿಸಿಕೊಳ್ಳಲು ಸನ್ನಾಹ ಮಾಡುತ್ತಿದ್ದಾನೆಂಬ ಅಸಮರ್ಥನೀಯವಾದ ಶಂಕೆಯು ಅವನ ಹದಗೆಟ್ಟಿದ್ದ ಬುದ್ಧಿಭ್ರಮಣೆಯನ್ನು ಇನ್ನೂ ಹೆಚ್ಚು ಉಲ್ಬಣಗೊಳ್ಳುವಂತೆ ಮಾಡಿತು. ರಾಜಕುಮಾರನನ್ನು ಹತ್ಯೆಗೈಯುವ ದುರುದ್ದೇಶದಿಂದ, ಅವನು ಗಾಢನಿದ್ರೆಯಲ್ಲಿದ್ದಾಗ ಅವನು ಮಲಗಿದ್ದ ಹಾಸಿಗೆ ಬಟ್ಟೆಗಳಿಗೆ ಬೆಂಕಿ ಇಡಿಸಿ, ಅವನು ಹೊರಹೋಗದಂತೆ ಹೊರಗಿನಿಂದ ಬಾಗಿಲಿಗೆ ಬೀಗಮುದ್ರೆ ಹಾಕಿದನು. ಬೆಂಕಿಯ ಹೊಗೆ ಮಲಗುವ ಕೊಠಡಿಯಲ್ಲಿ ಎದ್ದಿರಲು ರಾಜಕುಮಾರನು ದಿಗಿಲು ಬಿದ್ದನು. ಆದರೆ ಅವನು ಹಿತೈಷಿಗಳ ನೆರವಿನಿಂದ ರಕ್ಷಿಸಲ್ಪಟ್ಟು ರಹಸ್ಯವಾಗಿ ದೌಲತಾಬಾದಿನ ಕೋಟೆಯ ಒಳಕ್ಕೆ ಒಯ್ಯಲ್ಪಟ್ಟನು. ಅವನು ತನ್ನ ತಂದೆಯ ಮೇಲೆ ಕೂಡಲೇ ಸೇಡು ತೀರಿಸಿಕೊಂಡನು. ಕ್ರಿ.ಶ. ೧೫೮೮ರಲ್ಲಿ ಮುರ್ತುಜಾ ನಿಜಾಮಷಾಹನನ್ನು ಬಿಸಿನೀರಿನ ತೊಟ್ಟಿನಲ್ಲಿ ಸ್ನಾನಕ್ಕಿಳಿದಿದ್ದಾಗ ಉಸಿರಾಡಲಾರದಂತೆ ಮಾಡಿ ಅವನನ್ನು ಸಾಯಿಸಿಬಿಟ್ಟನು.[೧೨]

ಮುರ್ತುಜಾ ನಿಜಾಮಷಾಹನ ಮರಣದ ನಂತರ ಕ್ರಿ.ಶ. ೧೫೮೮ರಲ್ಲಿ ಮೀರ್‍ಯನ್ ಹುಸೇನ್ ನಿಜಾಮಷಾಹ ಎಂಬ ನಾಮದಿಂದ ಅಹಮದನಗರದ ಸಿಂಹಾಸನವನ್ನೇರಿದನು. ಅವನು ಸದಾ ಮದ್ಯ ಹಾಗೂ ಸುಖಲೋಲುಪತೆಗೆ ಬಲಿಯಾಗಿದ್ದನು. ಕ್ರೂರಿ ಮತ್ತು ನಿಷ್ಪ್ರಯೋಜಕ ರಾಜನಾಗಿದ್ದು, ತನ್ನ ಕಾಲವನ್ನೆಲ್ಲ ನಿರರ್ಥಕಗೊಳಿಸಿಕೊಂಡನು. ಅವನ ದುಶ್ಚರಿತೆಗಳು ಎಷ್ಟು ಅಸಹನೀಯ ಹಂತವನ್ನು ತಲುಪಿತ್ತೆಂದರೆ, ಕ್ರಿ.ಶ. ೧೫೮೯ರಲ್ಲಿ ಮೀರ್‍ಯನ್ ಹುಸೇನನು ಕೊಲೆಗೀಡಾಗಿ ಅವನ ದಾಯಾದಿ ಇಸ್ಮಾಯಿಲ್ ಪಟ್ಟಕ್ಕೆ ಬಂದನು. ಕೊಲೆಗಳ ನಾಟಕ ಒಮ್ಮೆ ಪ್ರಾರಂಭವಾಯಿತೆಂದರೆ ಅದು ವಿಚಿತ್ರ ತಿರುವುಗಳನ್ನು ಪಡೆಯುತ್ತದೆ. ಇಸ್ಮಾಯಿಲ್‌ನು ಹೆಚ್ಚು ಕಾಲ ಸಿಂಹಾಸನದ ಮೇಲಿರಲು ವಿಧಿ ಬಿಡಲಿಲ್ಲ. ಏಕೆಂದರೆ ಮೊಗಲ್ ಆಸ್ಥಾನವು ಚುರುಕಾಯಿತು. ಆ ಸಮಯದಲ್ಲಿ ಆಗ್ರಾದಲ್ಲಿದ್ದ

ಬರ್ಹಾನನಿಗೆ ಅಕ್ಬರನು ಬೆಂಬಲ ನೀಡಿದನು. ಅವನು ಈಗ ಸಿಂಹಾಸನವನ್ನೇರಿದ್ದ ಇಸ್ಮಾಯಿಲ್‌ನ ತಂದೆಯೇ ಆಗಿದ್ದನು. ತನ್ನ ಮಗನ ವಿರುದ್ಧವೇ ದಂಗೆ ಎದ್ದನು. ಈ ನಾಟಕದಲ್ಲಿ ಬಿಜಾಪುರದ ಮಂತ್ರಿ ದಿಲಾವರಖಾನನೂ ಒಂದು ಪಾತ್ರ ವಹಿಸಬೇಕಾಯಿತು. ಅವನು ಬರ್ಹಾನನ ಪಕ್ಷವನ್ನು ವಹಿಸಿ ಅಹಮದನಗರದ ಮೇಲೆ ಸೈನ್ಯದೊಂದಿಗೆ ದಾಳಿಮಾಡಿದನು. ಆದರೆ ಇಸ್ಮಾಯಿಲ್‌ನ ದಂಡನಾಯಕ ಜಮಾಲ್‌ಖಾನನಿಂದ ಸೋಲಪ್ಪಿದನು. ಆದರೆ ಬರ್ಹಾನನು ಅಕ್ಬರನ ಬೆಂಬಲದಿಂದ ತನ್ನ ಮಗನನ್ನು ಸಿಂಹಾಸನದಿಂದ ಕೆಳಗಿಳಿಸಿ ಅಹಮದನಗರದ ಸಿಂಹಾಸನವನ್ನು ವಶಪಡಿಸಿಕೊಂಡನು. ಬರ್ಹಾನನು ಸಿಂಹಾಸನವನ್ನೇರಿದಾಗ ವೃದ್ಧನಾಗಿದ್ದನು. ಆದರೂ ಕೆಲವು ಸಮಯದವರೆಗೆ ಅಹಮದನಗರ ರಾಜ್ಯವನ್ನು ಶಾಂತಿಯಿಂದ ಕಾಪಾಡಿಕೊಂಡು ಹೋಗುವಲ್ಲಿ ಸಫಲನಾಗಿದ್ದನು. ಆದರೆ ಇವನ ಆಳ್ವಿಕೆಯು ಅಹಮದನಗರ ಮತ್ತು ಮತ್ತು ಬಿಜಾಪುರಗಳ ಮಧ್ಯೆ ಇದ್ದ ಹಿಂದಿನ ಕಲಹಗಳನ್ನು ಮರುಕಳಿಸುವಂತೆ ಮಾಡಿತು. ಏಕೆಂದರೆ ಧಾರಾಸೇವ್‌ನಲ್ಲಿ ನಡೆದು ಹೋದ ಯುದ್ಧದಲ್ಲಿ ಬಿಜಾಪುರದ ದಿಲಾವರಖಾನನ ಸೋಲು ಅವನ ಪತನದ ಸೂಚಕವಾಯಿತು. ಅವನು ಬಿಜಾಪುರವನ್ನು ತ್ಯಜಿಸಿ ಅಹಮದನಗರಕ್ಕೆ ಪಲಾಯನ ಮಾಡಲೇಬೇಕಾಯಿತು. ಅಲ್ಲಿ ಬರ್ಹಾನನು ಅವನನ್ನು ಪ್ರೀತಿಪೂರ್ವಕವಾಗಿ ಸ್ವಾಗತಿಸಲು ಕಾರಣವೇನೆಂದರೆ ಅಹಮದನಗರದ ಅಧಿಕಾರ ಪಡೆಯಲು ಸೈನಿಕ ಬೆಂಬಲ ನೀಡಿದನು. ಅದರ ಪ್ರತಿಫಲಕ್ಕಾಗಿ ಬರ್ಹಾನನು ದಿಲಾವರಖಾನನ್ನು ತನ್ನ ಅಧಿಕಾರಿಯಾಗಿ ನೇಮಿಸಿಕೊಂಡನು. ಈ ವಿಷಯ ತಿಳಿದು ಬಿಜಾಪುರದ ಎರಡನೇ ಇಬ್ರಾಹಿಂ ಆದಿಲ್‌ಷಾಹನು ಧಾರಾಸೇವ್ ಯುದ್ಧದಲ್ಲಿ ಜಮಾಲ್‌ಖಾನನ ಹಸ್ತಗತವಾಗಿದ್ದ ಮುನ್ನೂರು ಆನೆಗಳ ಸಮೇತ ದಿಲಾವರಖಾನನನ್ನು ಬಿಜಾಪುರಕ್ಕೆ ಹಿಂದಿರುಗಿಸುವಂತೆ ಬರ್ಹಾನನನ್ನು ಪ್ರಾರ್ಥಿಸಿದನು. ಆದರೆ ದಿಲಾವರಖಾನನ್ನು ಹಿಂದಿರುಗಿಸಲು ಬರ್ಹಾನನು ತಿರಸ್ಕರಿಸಿದ. ಅಷ್ಟೇ ಅಲ್ಲದೆ ಕ್ರಿ.ಶ. ೧೫೯೨ರಲ್ಲಿ ಬಿಜಾಪುರದ ಗಡಿ ಪ್ರದೇಶಗಳ ಮೇಲೆ ದಾಳಿಯನ್ನು ಕೈಗೊಂಡನು. ಅಲ್ಲಿ ತನಗೆ ಯಾವ ವಿರೋಧವಿಲ್ಲದಿದ್ದುದನ್ನು ಗಮನಿಸಿ, ಬಿಜಾಪುರದ ಪ್ರದೇಶಗಳ ಮೇಲೆ ಆಕ್ರಮಣವನ್ನು ಮುಂದುವರಿಸಿದನು. ಜೊತೆಗೆ ಭೀಮಾನದಿಯ ದಂಡೆಯ ಮೇಲಿನ ಮಂಗಳವೇಢೆ ಕೋಟೆಯನ್ನು ನಿರ್ಮಿಸಿ ಭದ್ರಪಡಿಸಿಕೊಂಡನು. ಆದರೆ ಎರಡನೇ ಇಬ್ರಾಹಿಂ ಆದಿಲ್‌ಷಾಹನು ರಣಾಂಗಣದಲ್ಲಿ ಶತ್ರುವನ್ನು ಮುಖಾಮುಖಿ ಎದುರಿಸವ ಬದಲು, ಶತ್ರುಗಳಿಗೆ ಒದಗುತ್ತಿದ್ದ ಆಹಾರ ಮತ್ತು ಶಸ್ತ್ರಾಸ್ತ್ರಗಳ ಸರಬರಾಜನ್ನು ಸ್ಥಗಿತಗೊಳಿಸಲು ಮತ್ತು ಅವರಿಗೆ ಸಾಧ್ಯವಾದ ಎಲ್ಲ ರೀತಿಯಲ್ಲಿಯೂ ಕಿರುಕುಳವನ್ನು ಉಂಟುಮಾಡಲು ಬಲವಾದ ಮರಾಠ ಅಶ್ವಾರೋಹಿ ದಳವೊಂದನ್ನು ಕಳುಹಿಸಿದನು. ಅವರು ಬರ್ಹಾನನಿಗೆ ಎಂತಹ ಶೋಚನೀಯ ಪರಿಸ್ಥಿತಿಯನ್ನು ಉಂಟುಮಾಡಿದರೆಂದರೆ, ಅವನು ತನಗೆ ಅಗತ್ಯವಾಗಿದ್ದ ಸಾಮಾನು ಸರಂಜಾಮುಗಳನ್ನು ಮತ್ತೆ ಪೂರೈಸಿಕೊಳ್ಳಲು ತನ್ನ ರಾಜ್ಯಕ್ಕೆ ಹಿಂದೆ ಸರಿಯಬೇಕಾಯಿತು. ಇದನ್ನು ಸಿದ್ಧ ಮಾಡಿಕೊಂಡಾದ ಮೇಲೆ ಅವನು ದಂಡೆತ್ತಿ ಸೊಲ್ಲಾಪುರದ ಕಡೆಗೆ ನಡೆದನು. ಆದರೆ ಬಿಜಾಪುರದ ಸೈನ್ಯವು ಅವನನ್ನು ತೀವ್ರವಾಗಿ ಪರಾಭವಗೊಳಿದವು. ಈ ಪ್ರಭಾವದ ಪರಿಣಾಮವು ಅವನ ಸ್ಥಾನವನ್ನು ಎಷ್ಟರ ಮಟ್ಟಿಗೆ ಚ್ಯುತಿಗೊಳಿಸಿತೆಂದರೆ, ಅವನು ಬಿಜಾಪುರದೊಂದಿಗೆ ಸಂಧಿಯನ್ನು ಮಾಡಿಕೊಳ್ಳಲೇಬೇಕಾಗಿ ಬಂದಿತು. ಸಾಲದ್ದಕ್ಕೆ ಅವನು ದುರಸ್ತಿಗೊಳಿಸಿದ್ದ ಮಂಗಲವೇಢೆ ದುರ್ಗವನ್ನು ಅವನೇ ನೆಲಸಮ ಮಾಡಬೇಕಾಗಿ ಬಂದಿತು.

ಈ ಸೋಲಿನ ಸೇಡು ತೀರಿಸಿಕೊಳ್ಳಲು ಒಳ್ಳೆಯ ಅವಕಾಶಕ್ಕಾಗಿ ಬರ್ಹಾನನು ಕಾಯುತ್ತಿದ್ದನು. ಆದರೆ ಸಹೋದರನೇ ಆಗಿದ್ದ ಎರಡನೇ ಇಬ್ರಾಹಿಂ ಆದಿಲ್‌ಷಾಹನ ವಿರುದ್ಧ ದಂಗೆ ಎದ್ದಿದ್ದ ಇಸ್ಮಾಯಿಲ್‌ನಿಗೆ ಸಹಾಯ ಮಾಡಲು ದಂಡಯಾತ್ರೆ ಕೈಗೊಳ್ಳಬೇಕಾದ ಪರಿಸ್ಥಿತಿ ಬಂದಿದ್ದರಿಂದ ಬರ್ಹಾನನ ಈ ಉದ್ದೇಶ ಸಫಲಗೊಳ್ಳಲಿಲ್ಲ. ಆದರೆ ಪರೆಂದದನ್ನು ಅವನು ಸೇರಿದಾಗ ಇಸ್ಮಾಯಿಲನನ್ನು ಅವನ ಸಹೋದರ ಆಗಲೇ ಸೆರೆ ಹಿಡಿದು ಕೊಂದಿದ್ದನೆಂಬ ಸಮಾಚಾರ ಅವನಿಗೆ ತಿಳಿಯಿತು. ಇದರಿಂದಾಗಿ ಅವನು ಮತ್ತೆ ಅಹಮದನಗರಕ್ಕೆ ಹಿಂದಿರುಗಿದನು. ಅಲ್ಲಿ ಅವನು ತೀವ್ರವಾಗಿ ಕಾಯಿಲೆಗೆ ಗುರಿಯಾದನು. ಆಗಲೇ ಇಸ್ಮಾಯಿಲನಿಗೆ ಸಹಾಯ ಒದಗಿಸಿದ್ದಕ್ಕೆ ಬರ್ಹಾನನ ಬಗ್ಗೆ ತುಂಬಾ ಕೋಪಗೊಂಡಿದ್ದ ಅವನ ಸಹೋದರ ಎರಡನೇ ಇಬ್ರಾಹಿಂನು ಅವನ ಮೇಲೆ ಯುದ್ಧ ಮಾಡಲು ಒಂದು ಸೈನ್ಯವನ್ನು ಕಳುಹಿಸಿದನು. ಬರ್ಹಾನನ ಸೈನ್ಯವನ್ನು ಸೋಲಿಸಿ ಅವನ ಸೇನಾಧಿಪತಿಯಾಗಿದ್ದ ಉಜ್‌ಬಕ್‌ಖಾನನನ್ನು ಕೊಂದು ಹಾಕಿದನು. ಈ ವರ್ತಮಾನವು ಕಾಯಿಲೆಯಲ್ಲಿದ್ದ ಅವನನ್ನು ತೀವ್ರವಾಗಿ ತಲ್ಲಣಗೊಳಿಸಿತು. ಪರಿಣಾಮವಾಗಿ ಅವನ ಆರೋಗ್ಯ ಇನ್ನೂ ಹದಗೆಟ್ಟು ಅವನು ಹಾಸಿಗೆ ಹಿಡಿಯುವಂತೆ ಮಾಡಿತು. ಆದರೆ ೧೫೯೫ರಲ್ಲಿ ಬರ್ಹಾನನು ಅಹಮದನಗರದಲ್ಲಿ ಮರಣ ಹೊಂದಿದನು. ನಂತರ ಬರ್ಹಾನನ ಹಿರಿಯ ಮಗ ಇಬ್ರಾಹಿಂ ನಿಜಾಮುಷಾಹನು ಕ್ರಿ.ಶ.೧೫೯೫ರಲ್ಲಿ ಅಹಮದನಗರದ ಸಿಂಹಾಸನವನ್ನು ಅಲಂಕರಿಸಿದನು. ಆದರೆ ಚಾಂದ್‌ಬೀಬಿಯು ಬಿಜಾಪುರದಲ್ಲಿ ರೀಜೆಂಟರ ಸಾಲು ಕೊಲೆಗಳನ್ನು ನೋಡಲಾರದೆ ಬಿಜಾಪುರವನ್ನು ತೊರೆದು ಅಹಮದನಗರಕ್ಕೆ ಬಂದಿದ್ದಳು. ಇಲ್ಲಿ ಇನ್ನೂ ಹೀನಾಯವಾದ ಒಬ್ಬರೊಬ್ಬರನ್ನು ಬೆದರಿಸುತ್ತಾ ಗಂಟಲು ಕೊಯ್ಯುತ್ತಾ ರಾಜ್ಯವಾಳುವ ಪರಿಸ್ಥಿತಿಯನ್ನು ಕಂಡು ಅವಳು ಅಹಮದನಗರದಲ್ಲಿ ಉಳಿಯಲು ನಿರ್ಧರಿಸಿದಳು.

### ೪.೪. ಅಹಮದನಗರದಲ್ಲಿ ಅಧಿಕಾರ ಪಡೆದ ಬಗೆ

ಬರ್ಹಾನನ ಮರಣದ ನಂತರ ಅವನ ಹಿರಿಯ ಮಗನಾದ ಇಬ್ರಾಹಿಂ ನಿಜಾಮುಷಾಹನು ಅಹಮದನಗರದಲ್ಲಿ ಅಧಿಕಾರಕ್ಕೆ ಬಂದನು. ಆದರೆ ಅವನ ಆಳ್ವಿಕೆಯ ಕಾಲಾವಧಿ ಮಾತ್ರ ಕೇವಲ ಕೆಲವು ತಿಂಗಳಿಗಷ್ಟೇ ಸೀಮಿತಗೊಂಡಿತ್ತು. ಮಿಯಾನ್ ಮಂಜ್ಜು ಎಂಬುವನು ಇಬ್ರಾಹಿಂನ ಪ್ರಧಾನಮಂತ್ರಿಯಾಗಿದ್ದನು. ಸುಲ್ತಾನ ಮತ್ತು ಪ್ರಧಾನ ಮಂತ್ರಿ ಇಬ್ಬರೂ ಇಕ್ಲಾಸ್‌ಖಾನನು ಹಿಂದೆ ಎಸಗಿದ್ದ ಅಪರಾಧವನ್ನು ಕ್ಷಮಿಸಿದರು. ಆದರೆ ಇಕ್ಲಾಸ್‌ಖಾನನು ತಾನು ಪ್ರಧಾನಿಗೆ ಸಲ್ಲಿಸಬೇಕಾಗಿದ್ದ ಕೃತಜ್ಞತೆಯನ್ನು ಮರೆತದಲ್ಲದೆ ತಾನೂ ಮಿಯನ್ ಮಂಜ್ಜು ಇಬ್ಬರೂ ದಖ್ಖನೀ ಪಕ್ಷದವರೇ ಆಗಿದ್ದರೂ, 'ಹಾಲುಣಿಸಿದವರಿಗೆ ವಿಷವಿಕ್ಕುವುದು' ಎಂಬ ಗಾದೆ ಮಾತಿನಂತೆ ಇಕ್ಲಾಸ್‌ಖಾನನು ಮಿಯಾನ್ ಮಂಜ್ಜುವಿನ ವಿರುದ್ಧ ಒಂದು ಪ್ರಬಲವಾದ ಸೈನ್ಯವನ್ನು ಎತ್ತಿಕಟ್ಟಿದ್ದನು. ಸ್ವಪ್ರತಿಷ್ಠೆ ಹಾಗೂ ಸ್ವಭಾವ ಸಮೃದ್ಧಿಯಷ್ಟೇ ಇಕ್ಲಾಸಖಾನನ ಉದ್ದೇಶವಾಗಿತ್ತು. ಪ್ರಧಾನಿಯ ಪದವಿಯನ್ನು ಮಿಯಾನ್‌ನಿಗೆ ತಪ್ಪಿಸಿ ಅದನ್ನು ತಾನೇ ಗಳಿಸಿಕೊಳ್ಳಬೇಕೆಂಬ ದುರುದ್ದೇಶ ಅವನ ಈ ನಡತೆಗೆ ಮುಖ್ಯ ಕಾರಣವಾಗಿತ್ತು. ರಾಜ್ಯದ ವ್ಯವಹಾರಗಳು ಹೀಗೆ ಒಂದು ವಿಷಮ ಸ್ಥಿತಿಯ ಕಡೆಗೆ ದಾಪುಗಾಲು ಹಾಕುತ್ತಿರುವಾಗ, ಬಿಜಾಪುರದ ರಾಜಪ್ರತಿನಿಧಿಯು ಅಪಮಾನಕ್ಕೆ ಗುರಿ ಮಾಡಲ್ಪಟ್ಟನು. ಇಕ್ಲಾಸ್‌ಖಾನನು ವಿಷಯ ಲೋಲುಪತೆಯಲ್ಲಿ ಮುಳುಗಿದ್ದ ತರುಣ ಸುಲ್ತಾನನ್ನು ಬಿಜಾಪುರದ ವಿರುದ್ಧ ಯುದ್ಧ ಘೋಷಿಸುವಂತೆ ಒತ್ತಾಯ ಮಾಡಿದನು.

ಈ ಯುದ್ಧವನ್ನು ತಪ್ಪಿಸಲು ಮಿಯಾನ್‌ಮಂಜ್ಞು ಮಾಡಿದ ಎಲ್ಲ ಪ್ರಯತ್ನಗಳೂ ವಿಫಲವಾದವು. ತುಂಬಾ ಸಂಕಟದ ವಿಷಯವೆಂದರೆ ಎರಡು ರಾಜ್ಯಗಳ ನಡುವೆ ನಡೆದ ಆ ಯುದ್ಧದಲ್ಲಿ ಇಬ್ರಾಹಿಂನನ್ನು ಕೊಂದು ಹಾಕಲಾಯಿತು.

ಇಬ್ರಾಹಿಂ ನಿಜಾಮಷಾಹನ ಮರಣವಾದ ಕೂಡಲೇ ಅವನ ಸೈನ್ಯಗಳು ಹಿಂದಕ್ಕೆ ಪಲಾಯನ ಮಾಡಿದವು. ವಿಜಯಿಗಳು ಯುದ್ಧದಲ್ಲಿ ಕೊಳ್ಳೆ ಹೊಡೆದು ಅಪಾರ ಸಂಪತ್ತನ್ನು ತುಂಬಿಕೊಂಡು ಬಿಜಾಪುರಕ್ಕೆ ಹಿಂದಿರುಗಿದರು. ಮತ್ತೆ ಅಹಮದನಗರದಲ್ಲಿ ಗೊಂದಲ ಹಾಗೂ ಅರಾಜಕತೆ ಉಂಟಾಯಿತು. ಈ ಪರಿಸ್ಥಿತಿಯಲ್ಲೂ ಮಂತ್ರಿವರ್ಗದವರು ಮತ್ತು ಪ್ರಮುಖ ಗಣ್ಯ ಕುಲೀನರು ರಾಜ್ಯದ ಹಿತಕ್ಕಾಗಿ ಒಟ್ಟು ಸೇರಿ ಯಾವ ಯೋಜನೆಯನ್ನೂ ಹಾಕಿಕೊಳ್ಳದೆ ಕೇವಲ ಸ್ವಲಾಭ ಸಮೃದ್ಧಿಯಲ್ಲಿಯೇ ತೊಡಗಿದ್ದರು. ಆ ರಾಜ್ಯದಲ್ಲಿ ಅದರ ಶೈಶವ ದೆಶೆಯಲ್ಲಿಯೂ ವಿಭಿನ್ನ ಆಸಕ್ತಿಗಳನ್ನು ಹೊಂದಿದ್ದ ವಿವಿಧ ಪಕ್ಷಗಳು ಇದ್ದೇ ಇದ್ದವು. ಅವರ ಸ್ವಾರ್ಥಪರತೆ ಅದರ ಸತ್ವವನ್ನೇ ಹೀರಿಹಾಕಿತ್ತು. ಸುಲ್ತಾನರ ಅಸಮರ್ಥತೆ ಹಾಗೂ ದೌರ್ಬಲ್ಯದಲ್ಲಿ ಅದು ಸಂಪೂರ್ಣ ವಿನಾಶಗೊಳ್ಳುವಂತಾಯಿತು. ಇಬ್ರಾಹಿಂ ನಿಜಾಮಷಾಹನ ಮರಣವಾದ ಸ್ವಲ್ಪ ಸಮಯದಲ್ಲಿಯೇ ವಿವಿಧ ನಿಜಾಮಷಾಹ ಗಣ್ಯಕುಲೀನ ವರ್ಗದವರ ನಾಲ್ಕು ಪಕ್ಷಗಳು ಜನ್ಮ ತಾಳಿದವು. ಅವುಗಳಲ್ಲಿ ಪ್ರತಿಯೊಂದು ಪಕ್ಷವು ಸಿಂಹಾಸನದ ಮೇಲೆ ತನ್ನ ಹಕ್ಕನ್ನು ಹೂಡಿತು. ಮರಣ ಹೊಂದಿದ ಚಿಕ್ಕಮ್ಮನು ಹಾಗೂ ಮೊದಲನೆಯ ಅಲಿ ಆದಿಲ್‌ಷಾಹನ ವಿಧವೆಯೂ ಆದ ಚಾಂದ್‌ಬೀಬಿಯು ಇಬ್ರಾಹಿಂನ ಹಸುಗೂಸಾದ ಬಹದೂರನನ್ನು ನ್ಯಾಯಬದ್ಧ ಉತ್ತರಾಧಿಕಾರಿಯೆಂದು ಘೋಷಿಸಿ ಅವನ ಹಕ್ಕನ್ನು ಸಮರ್ಥಿಸಿದಳು. ಅವಳು ಅಪ್ರಾಪ್ತ ವಯಸ್ಕ ಸುಲ್ತಾನನ ಪ್ರತಿನಿಧಿಯಾಗಿ ತಾನೇ ಅಧಿಕಾರದ ಸೂತ್ರವನ್ನು ವಹಿಸಿಕೊಂಡಳು.

### ಟಿಪ್ಪಣಿಗಳು

೧. ಕೃಷ್ಣ ಕೊಲ್ಹಾರ ಕುಲಕರ್ಣಿ, ಕಿತಾಬೆ-ನೌರಸ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ೧೯೯೬, ಪುಟ-೬

೨. ಅದೇ, ಪುಟ-೬

೩. ಕೃಷ್ಣಕೊಲ್ಹಾರ ಕುಲಕರ್ಣಿ, ಬುಸಾತಿನೆ-ಸಲಾತೀನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪುಟ-೧೩೫

೪. ಅದೇ, ಪುಟ-೧೪೨

೫. ಅದೇ, ಪುಟ-೧೪೪

೬. ಕೃಷ್ಣ ಕೊಲ್ಹಾರ ಕುಲಕರ್ಣಿ, ಬಿಜಾಪುರ ಆದಿಲ್‌ಶಾಹಿ, ಪ್ರಕಾಶಕರು, ಸಿಕ್ಯಾಬ ಆದಿಲಶಾಹಿ ಅಧ್ಯಯನ ಸಂಸ್ಥೆ, ಬಿಜಾಪುರ, ನಿರಾನಿ, ಪುಟ-೯೮

೭. ಕೃಷ್ಣ ಕೊಲ್ಹಾರ ಕುಲಕರ್ಣಿ, ಪೂರ್ವೋಕ್ತ, ಪುಟ-೧೫೪

೮. ಕೃಷ್ಣ ಕೊಲ್ಹಾರ ಕುಲಕರ್ಣಿ, ಪೂರ್ವೋಕ್ತ, ಪುಟ-೯೯

೯. ಖಾದ್ರಿ ಎಸ್.ಎ., ಮೆಮೂಯಿರ್ಸ್ ಆಫ್ ಚಾಂದ್‌ಬೀಬಿ, ಉಸ್ಮಾನಿಯ ಯೂನಿವರ್ಸಿಟಿ, ಹೈದ್ರಾಬಾದ್, ೧೯೩೮., ಪುಟ-೫೩.

೧೦. ಅದೇ, ಪುಟ-೫೪

೧೧. ಮಜುಂದಾರ್, ಆರ್.ಸಿ, ಮೊಗಲ್ ಸಾಮ್ರಾಜ್ಯ, ಭಾಗ-೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೩, ಪುಟ-೧೯೪

೧೨. ಅದೇ, ಪುಟ-೧೯೫

* * *

## ಅಧ್ಯಾಯ ಐದು

# ಚಾಂದ್‌ಬೀಬಿಯ ಬಾಹ್ಯ ಸಂಘರ್ಷಗಳು

## ಚಾಂದ್‌ಬೀಬಿಯ ಬಾಹ್ಯ ಸಂಘರ್ಷಗಳು

ಅಹಮದನಗರದಲ್ಲಿ ಇಬ್ರಾಹಿಂ ನಿಜಾಮ ಷಾಹನ ಮರಣದ ನಂತರ ಮತ್ತೆ ಅಲ್ಲಿನ ರಾಜಕೀಯದಲ್ಲಿ ಅವ್ಯವಸ್ಥೆ ಮತ್ತು ಗೊಂದಲ ಉಂಟಾಯಿತು. ಅಹಮದನಗರದ ಅಧಿಕಾರಿಗಳು ಮತ್ತು ನೋಬೆಲ್ಸ್ (ಶ್ರೀಮಂತ) ವರ್ಗದವರು ನಾಲ್ಕು ಪಕ್ಷಗಳಾಗಿ ಜನ್ಮ ತಾಳಿದವು. ಅವುಗಳಲ್ಲಿ ಪ್ರತಿಯೊಂದು ಪಕ್ಷವೂ ಸಿಂಹಾಸನದ ಮೇಲಿನ ತನ್ನ ಹಕ್ಕನ್ನು ಹೂಡಿತು. ಇಕ್ಲಾಸ್‌ಖಾನನು ಮೊದಲನೆಯ ಪಕ್ಷದ ನಾಯಕನಾಗಿದ್ದು, ತಾನು ದತ್ತುವಾಗಿ ಪಡೆದುಕೊಂಡಿದ್ದ 'ಮೋತಿ' ಎಂಬ ಹೆಸರಿನ ಬಾಲಕನೇ ನ್ಯಾಯಬದ್ಧ ಸುಲ್ತಾನನೆಂದು ಘೋಷಣೆ ಮಾಡಿದನು. ಅಬಿಸೀನಿಯಾದ ಗಣ್ಯಕುಲೀನ ವರ್ಗದ ಆಭಂಗ್‌ಖಾನ ಎನ್ನುವವನು ಎರಡನೆಯ ಪಕ್ಷವನ್ನು ರಚಿಸಿ ಒಂದನೆಯ ಬರ್ಹಾನ್ ನಿಜಾಮ ಷಾಹನ ಮಗನಾದ ಷಾಹ ಅಲಿ ಎನ್ನುವನನ್ನು ಬೆಂಬಲಿಸಿದನು. ಮೂರನೇ ಪಕ್ಷದ ನಾಯಕನಾಗಿದ್ದ ಮಿಯಾನ್ ಮಂಜ್ಞುವು ತನ್ನ ಪ್ರತಿನಿಧಿಯಾದ ಅಹಮದ್ ಎಂಬುವನೇ ನಿಜಾಮ್ ಷಾಹಿ ಸಿಂಹಾಸನಕ್ಕೆ ನಿಜವಾದ ಉತ್ತರಾಧಿಕಾರಿಯೆಂದು ಹೇಳಿದನು. ಅಹಮದನಗರದಲ್ಲಿ ಉಂಟಾದ ರಾಜಕೀಯ ಗದ್ದಲವನ್ನು ಅರಿತು ಕೆಲವರು ನಿಷ್ಠಾವಂತ ಅಧಿಕಾರಿಗಳು ಅಹಮದನಗರದ ರಕ್ಷಣೆ ಮತ್ತು ಏಳಿಗೆಗಾಗಿ ಚಾಂದ್‌ಬೀಬಿಯನ್ನು ರಾಜ್ಯದ ರಾಯಭಾರವನ್ನು ನೋಡಿಕೊಳ್ಳಲು ಆಹ್ವಾನಿಸಿದರು.[೧] ಅವರ ಆಹ್ವಾನದ ಮೇರೆಗೆ ಚಾಂದ್‌ಬೀಬಿಯು ನಾಲ್ಕನೇ ಪಕ್ಷದ ಏಳಿಗೆಗೆ ಕಾರಣವಾದಳು. ಇವಳು ಇಬ್ರಾಹಿಂನ ಎಳೆಯ ಗಂಡು ಮಗ 'ಬಹದ್ದೂರ'ನನ್ನು ನ್ಯಾಯಬದ್ಧ ಉತ್ತಾರಾಧಿಕಾರಿಯೆಂದು ಘೋಷಿಸಿ, ಅವನ ಹಕ್ಕನ್ನು ಸಮರ್ಥಿಸಿದಳು. ಅವಳು ಅಪ್ರಾಪ್ತ ವಯಸ್ಕ ಸುಲ್ತಾನನ ಪ್ರತಿನಿಧಿಯಾಗಿ ತಾನೇ ಅಧಿಕಾರದ ಸೂತ್ರವನ್ನು ವಹಿಸಿಕೊಂಡಳು. ನಂತರ ಚಾಂದ್‌ಬೀಬಿಯು ಪ್ರಜೆಗಳನ್ನು ಉದ್ದೇಶಿಸಿ ಒಂದು ಸಂದೇಶವನ್ನಿತ್ತು ಅವರು ಶಾಂತಿ ಸೌಹಾರ್ದಗಳಿಂದ ಬಾಳಬೇಕೆಂದು ಪ್ರಾರ್ಥಿಸಿದಳು. ಆದರೆ ಅದೆಲ್ಲವೂ ನಿಷ್ಫಲವೇ ಆಯಿತು. ಈ ಸರದಾರರು ರಾಜಮನೆತನದ ಒಬ್ಬೊಬ್ಬ ಬಾಲಕನನ್ನು ಹಿಡಿದುಕೊಂಡು ತಮ್ಮ ಬೇಳೆ ಬೇಯಿಸಿಕೊಳ್ಳುವುದಕ್ಕಾಗಿ ಕಚ್ಚಾಡುತ್ತಿದ್ದರು.

ಚಾಂದ್‌ಬೀಬಿಯು ಅಹಮದನಗರದಲ್ಲಿ ಬಹದ್ದೂರನನ್ನು ಸುಲ್ತಾನನ್ನಾಗಿ ನೇಮಿಸುವುದಕ್ಕಾಗಿ ಬಿಜಾಪುರದ ಎರಡನೆಯ ಇಬ್ರಾಹಿಂ ಆದಿಲ್‌ಷಾಹನ ಬೆಂಬಲದಿಂದ ಅಲ್ಲಿನ ಆಂತರಿಕ ಸಮಸ್ಯೆಯನ್ನು ಬಗೆಹರಿಸಿಕೊಂಡು ಆಡಳಿತವನ್ನು ಸುವ್ಯವಸ್ಥೆಯಿಂದ ನಡೆಸಿಕೊಂಡು ಹೋಗುವಲ್ಲಿ ಯಶಸ್ವಿಯಾಗಿದ್ದಳು.

### ೫.೧ ಮೊಗಲ್‌ರ ದಖನ್ ನೀತಿ ಹಾಗೂ ಯುದ್ಧಗಳು

ಬಾಬರನ ಕಾಲದಿಂದಲೂ ಮೊಗಲ್‌ರು ದಖನ್ನಿನ ಮೇಲೆ ತನ್ನ ಪ್ರಭುತ್ವ ಸಾಧಿಸಲು ಪ್ರಯತ್ನಿಸಿದರು. ಆದರೆ ನೆಪಗಳಿಗೇನೂ ಕೊರತೆ ಇರಲಿಲ್ಲ, ಏಕೆಂದರೆ ಬಹುಮನಿಯ ಕೊನೆಯ ಸುಲ್ತಾನನಾದ ಕಲೀಮುಲ್ಲಾನು

ತನ್ನ ನೋಬೆಲ್ಸ್‌ರ ದಂಗೆಯ ದಮನ ಮಾಡಲು ಬಾಬರನ ನೆರವನ್ನು ಕೋರಿದನು.[೨] ಬಹಮನಿಯ ನೋಬೆಲ್ಸ್‌ರು ಕಲೀಮುಲ್ಲಾನನ್ನು ತಮ್ಮ ಕೈಗೊಂಬೆಯಾಗಿ ಮಾಡಿಕೊಂಡು, ಅವನೊಬ್ಬ ಸೆರೆಮನೆಯಲ್ಲಿನ ಕೈದಿ ಎಂಬಂತೆ ವರ್ತಿಸುತ್ತಿದ್ದರು ಅವನು ಮೊಗಲ್‌ರೊಂದಿಗೆ ನಡೆಸಿದ ಸಂಧಾನ ರಹಸ್ಯವಾಗಿ ಉಳಿಯಲಿಲ್ಲ. ದಖ್ಖನ್ನಿನ ರಾಜಕೀಯದಲ್ಲಿ ಮೊಗಲ್ ಸುಲ್ತಾನ ಬಾಬರನ ಮಧ್ಯ ಪ್ರವೇಶದ ಭೀತಿಯಿಂದ ಇಸ್ಮಾಯಿಲ್ ಆದಿಲ್‌ಷಾಹ, ಬರ್ಹಾನ್ ನಿಜಾಂಷಾಹ, ಕುಲಿಕುತುಬಷಾಹ ಮತ್ತು ಅಮೀರ್ ಬರೀದರು ಅಪಾರ ಉಡುಗೊರೆಗಳನ್ನು ಕಳುಹಿಸಿ ಬಾಬರನನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದರು.[೩] ಬಾಬರ್ ಆಳಿದ್ದು ಸ್ವಲ್ಪಕಾಲ ಮಾತ್ರ. ಹಾಗಾಗಿ ಅವನು ದಖ್ಖನ್ನಿನ ಮೇಲೆ ಯಾವುದೇ ಪರಿಣಾಮಕಾರಿಯಾದ ಕ್ರಮವನ್ನು ಕೈಗೊಳ್ಳಲಾಗಲಿಲ್ಲ. ಅವನ ನಂತರ ಹುಮಾಯೂನನ ಆಳ್ವಿಕೆಯು ಅನೇಕ ಅಡೆತಡೆಗಳಿಂದ ಕೂಡಿದ್ದ ಕಾರಣ ದಖ್ಖನ್ನಿನ ಷಾಹಿ ಸುಲ್ತಾನರಿಗೆ ಸ್ವಲ್ಪ ಸಮಯ ಬಿಡುವು ಕೊಟ್ಟಿತು. ದಖನ್‌ನ ಮೇಲೆ ಮೊಗಲ್ ನೀತಿಯನ್ನು ಅಕ್ಬರ ಪ್ರಾರಂಭಗೊಳಿಸಿದನು. ಅದು ಜಹಾಂಗೀರ ಷಹಾಜಹಾನ ಮತ್ತು ಔರಂಗಜೇಬ ಚಕ್ರವರ್ತಿಗಳ ಕಾಲದವರೆಗೆ ಮುಂದುವರೆಯಿತು. ಗುಜರಾತ್ ಸೇರಿದಂತೆ ಇಡೀ ಉತ್ತರ ಭಾರತದ ರಾಜ್ಯಗಳನ್ನು ವಶಪಡಿಸಿಕೊಳ್ಳಲು ಮೊಗಲ್‌ರಿಗೆ ಕಷ್ಟದ ಕೆಲಸವಾಗಿರಲಿಲ್ಲ. ಆದರೆ ದಖ್ಖನ್ನಿನ ರಾಜ್ಯಗಳು ವಶಪಡಿಸಿಕೊಳ್ಳಲು ಅವರಿಗೆ ಎರಡು ದಶಕಗಳಿಗೂ ಹೆಚ್ಚು ಕಾಲ ಬೇಕಾಯಿತು. ಅಕ್ಬರನಿಂದ ಔರಂಗಜೇಬನವರೆಗೆ ಎಲ್ಲ ಚಕ್ರವರ್ತಿಗಳ ಸಹನೆ, ಶಕ್ತಿ ಮತ್ತು ಸಂಪನ್ಮೂಲಗಳನ್ನು ಅದು ಪರೀಕ್ಷಿಸಿತು.

ಔರಂಗಜೇಬನು ದಖನ್‌ನ ಮೇಲೆ ವಿಜಯವನ್ನು ಸಾಧಿಸಿ, ರೂಢಿಸಿಕೊಳ್ಳಲು ಎರಡು ದಶಕಗಳಿಗೂ ಹೆಚ್ಚು ಕಾಲ ಇಲ್ಲಿ ಇರಬೇಕಾಯಿತು. ಮೊಗಲ್‌ರಲ್ಲಿ ಅತ್ಯಂತ ಶ್ರೇಷ್ಠನೆನಿಸಿದ ಅಕ್ಬರನೂ ದಖ್ಖನ್ನನ್ನು ಎದುರಿಸಲಾಗಲಿಲ್ಲ ಇತಿಹಾಸವು ಮರುಕಳಿಸಿತು. ತುಘಲಕರು ದಖ್ಖನ್ನಿನ ಮೇಲಿನ ಅತಿಮೋಹದಿಂದ ನಾಶ ಹೊಂದಿದರು. ಅದರ ಫಲವಾಗಿ ವಿಜಯನಗರ ಮತ್ತು ಬಹಮನಿ ರಾಜ್ಯಗಳು ಉದಯಿಸಿದವು. ಹಾಗೆಯೇ ಷಾಹಿ ರಾಜ್ಯಗಳನ್ನು ನಾಶ ಮಾಡಿ ಮೊಗಲ್‌ರು ತಮ್ಮ ವಿನಾಶಕ್ಕೆ ದಾರಿ ಮಾಡಿಕೊಂಡರು. ಮೊದಲು ಮರಾಠರು ಮೇಲೆ ಬಂದರು. ಆಮೇಲೆ ಯುರೋಪಿಯನ್ನರು ಪ್ರಬಲರಾದರು.

ಸಮಕಾಲೀನ ದಖ್ಖನ್ನಿನ ಪ್ರಾಮುಖ್ಯವೇನೆಂಬುದು ಅಕ್ಬರನ ಸೂಕ್ಷ್ಮಮತಿಗೆ ಹೊಳೆದಿತ್ತು. ಅಲಿ ಆದಿಲ್‌ಷಾಹನು ಅಕ್ಬರನ ಗಮನಕ್ಕೆ ಬಂದದ್ದು ಕ್ರಿ.ಶ.೧೫೭೫ರಲ್ಲಿ. ಉತ್ತರಭಾರತದಲ್ಲಿ ಒಂದು ಸರ್ವೋನ್ನತ ಶಕ್ತಿಯೊಂದು ಉದಯಿಸಿದೆ ಎಂಬುದನ್ನು ಮನವರಿಕೆ ಮಾಡಿಕೊಡಲು ಅಕ್ಬರನು ಬಿಜಾಪುರಕ್ಕೆ ರಾಯಭಾರವನ್ನು ಕಳುಹಿಸಿದನು.[೪] ಆ ಶಕ್ತಿಯೊಂದಿಗೆ ಗೆಳೆತನವನ್ನು ಬೆಳೆಸಿಕೊಳ್ಳುವುದು ದಖ್ಖನ್ನಿಗೆ ಒಳ್ಳೆಯದು ಎಂದು ಆ ಮೂಲಕ ಸೂಚಿಸಿದನು. ಅಲಿ ಆದಿಲ್‌ಷಾಹನು ಆ ಪ್ರಾಮುಖ್ಯವನ್ನು ಅರಿತನು ಸುಲ್ತಾನನು ಕ್ವಾಜಾ ಅಬ್ದುಲ್ಲಾನು ಮೊಗಲ್ ದರ್ಬಾರಿಗೆ ಕಳುಹಿಸಿ ಅಕ್ಬರನೊಂದಿಗೆ ಒಳ್ಳೆಯ ಸಂಬಂಧವನ್ನು ಬಲಪಡಿಸಿಕೊಂಡನು. ಮೊಗಲ್ ಕಾರ್ಯಕ್ರಮ ಪಟ್ಟಿಯಲ್ಲಿ ಆಗಲೇ ದಖನ್ ಮೇಲು ತುದಿಯಲ್ಲಿತು. ಹಾಗಾಗಿ ಆದಿಲ್‌ಷಾಹಿ ರಾಯಭಾರಿಯ ಜೊತೆಗೆ ಹಕೀಂ ಅಲಿ ಗಿಲಾನಿ ಎಂಬ ಮೊಗಲ್ ಅಧಿಕಾರಿಯೂ ಬಂದನು. ಇವನು ಮೊಗಲ್ ಚಕ್ರವರ್ತಿಗೆ ಬಿಜಾಪುರದ ಸುಲ್ತಾನನು ನಿಷ್ಠೆಯನ್ನು ವ್ಯಕ್ತಪಡಿಸುವುದು ಉತ್ತಮ ಎಂದು ಅವನು ಅಲಿ ಆದಿಲ್‌ಷಾಹನಿಗೆ ಸಲಹೆ ನೀಡಿದನು. ಹೀಗೆ ಮೊಗಲ್‌ರ

ಸಂಪರ್ಕ ಮೊದಲ ಬಾರಿಗೆ ಬಿಜಾಪುರದೊಂದಿಗೆ ಅಲಿಯ ಅಧಿಕಾರಾವಧಿಯಲ್ಲಿ ಆಯಿತು. ಕ್ರಿ.ಶ.೧೫೮೦ರಲ್ಲಿ ಅಲಿ ಆದಿಲ್‌ಷಾಹನ ಮರಣ ಹೊಂದಿದ ನಂತರ ಅಕ್ಬರನ ವಕ್ರದೃಷ್ಟಿ ದಖನ್‌ನ ಮೇಲೆ ಬಿದ್ದಿತು. ಮೊಗಲ್ ಸಾಮ್ರಾಟನಾದ ಅಕ್ಬರನು ಕ್ರಿ.೧೫೯೦ರ ವೇಳೆಗೆ ಉತ್ತರ ಭಾರತದಲ್ಲಿ ಸಾಮ್ರಾಜ್ಯ ವಿಸ್ತರಣೆ ಮತ್ತು ಕ್ರೋಡೀಕರಣಗಳನ್ನು ಮುಗಿಸಿದ್ದನು.[೫] ಆಗ ಅವನು ದಖನ್‌ಕಡೆಗೆ ಗಮನ ಹರಿಸಿದನು. ಕ್ರಿ.ಶ.೧೫೯೧ರಲ್ಲಿ ಅಕ್ಬರನು ಅಹಮದನಗರ, ಬಿಜಾಪುರ, ಖಾನದೇಶ ಮತ್ತು ಗೋಲ್ಕೊಂಡ ಈ ನಾಲ್ಕು ದಖನ್ ರಾಜ್ಯಗಳಿಗೆ ತನ್ನ ರಾಯಭಾರಿಗಳನ್ನು ಕಳುಹಿಸಿ ಮೊಗಲ್ ಪ್ರಭುತ್ವವನ್ನು ಒಪ್ಪಿಕೊಳ್ಳಬೇಕೆಂದು ತಿಳಿಸಿ ಮತ್ತು ಕಪ್ಪಕಾಣಿಕೆ ನೀಡಬೇಕೆಂದು ಹೇಳಿದನು. ಆದರೆ ರಾಯಭಾರಿಗಳು ಕ್ರಿ.ಶ.೧೫೯೧ರಿಂದ ೧೫೯೩ರ ವರೆಗೆ ಎರಡು ವರ್ಷ ಕೆಲಸ ಮಾಡಿ, ದಖನ್ನಿನ ಷಾಹಿ ರಾಜ್ಯಗಳು ತಮ್ಮ ಪ್ರಭುತ್ವವನ್ನು ಬಿಟ್ಟುಕೊಡಲು ಸಿದ್ಧರಾಗಲಿಲ್ಲ ಎಂದು ಅಕ್ಬರನಿಗೆ ವರದಿ ಸಲ್ಲಿಸಿದರು.[೬] ಇದರಿಂದ ಅಕ್ಬರನು ತನ್ನ ಮಗ ಮುರಾದ್‌ನನ್ನು ಗುಜರಾತದ ರಾಜ್ಯಪಾಲರನ್ನಾಗಿ ನೇಮಕ ಮಾಡಿದನು. ಭಾರತದ ಇತರ ಭಾಗಗಳಂತೆಯೇ ದಖನ್ನಿನ ಸುಲ್ತಾನರೂ ತನಗೆ ಅಧೀನರಾಗುವಂತೆ ಮಾಡಬೇಕೆಂದು ಆಜ್ಞೆ ಮಾಡಿದನು. ಅದರಂತೆ ಮುರಾದ್‌ನನ್ನು ಮತ್ತು ಖಾನ್-ಎ-ಖಾನಾ ಇನ್ನೊಬ್ಬ ದಂಡನಾಯಕನೊಂದಿಗೆ ಬಾರಿ ಸೈನ್ಯದ ಜೊತೆಗೆ ದಖನ್‌ಗೆ ಕಳುಹಿಸಿದನು.

### ೫.೧.೧ ಮುರಾದ್‌ನ ಜೊತೆ ಯುದ್ಧ

ಅಹಮದನಗರದ ರಾಜ್ಯ ರಾಜಕೀಯದಲ್ಲಿ ಚಾಂದ್‌ಬೀಬಿಯ ಚಾಣಾಕ್ಷತನದಿಂದ ಇಬ್ರಾಹಿಂನ ಮಗ ಬಹದ್ದೂರನನ್ನು ನ್ಯಾಯಬದ್ಧ ಉತ್ತರಾಧಿಕಾರಿಯೆಂದು ಘೋಷಿಸಿ, ಅವನ ಹಕ್ಕನ್ನು ಸಮರ್ಥಿಸಿ ಅಲ್ಲಿನ ಆಡಳಿತವನ್ನು ತನ್ನ ಹತೋಟಿಗೆ ತೆಗೆದುಕೊಂಡಳು. ಆದರೆ ಇನ್ನೂ ಉಳಿದ ಸರದಾರರಾದ ಇಕ್ಲಾಸ್‌ಖಾನ, ಆಭಂಗ್‌ಖಾನ, ಮಿಯಾನ್ ಮಂಜ್ಹು ಇವರು ಅಹಮದನಗರದ ಸುಲ್ತಾನನ ಪ್ರತಿನಿಧಿಯಾಗಿ ಅಧಿಕಾರ ಪಡೆಯುವಲ್ಲಿ ವಿಫಲರಾದರು. ಈ ಮೂವರು ಸರದಾರರು ಅಹಮದನಗರದ ಅಧಿಕಾರ ಪಡೆದುಕೊಳ್ಳಲು ಚಾಂದ್‌ಬೀಬಿಯ ವಿರುದ್ಧ ಒಳಸಂಚು ಮಾಡುತ್ತಿದ್ದರು. ಆದರೆ ಮಿಯನ್ ಮಂಜ್ಹುವಿನ ಪ್ರತಿನಿಧಿಯಾದ ಅಹಮದ್ ಅವನು ಒಬ್ಬ ಕಳ್ಳ, ಹಕ್ಕುದಾರನೆಂಬ ವಿಚಾರ ಬಹುಬೇಗ ತಿಳಿದುಹೋಯಿತು. ಜೊತೆಗೆ ಇಕ್ಲಾಸ್‌ಖಾನನ ತೀವ್ರ ವಿರೋಧದಿಂದ ಮಿಯಾನ್‌ಮಂಜ್ಹುವಿನ ಪರಿಸ್ಥಿತಿ ಬಹಳ ಶೋಚನೀಯವಾಯಿತು.[೭] ಅವನು ಅಹಮದನಗರದ ಕೋಟೆಯೊಳಗೆ ರಕ್ಷಣೆ ಪಡೆದುಕೊಂಡು ಅಕ್ಬರನ ಮಗನೂ, ಗುಜರಾತಿನ ರಾಜ್ಯಪಾಲನೂ ಆಗಿದ್ದ ಯುವರಾಜ ಮುರಾದನನ್ನು ತನ್ನ ಸಹಾಯಕ್ಕಾಗಿ ಪ್ರಾರ್ಥಿಸಿಕೊಂಡನು.[೮] ಇದಕ್ಕೆ ಪೂರ್ವಭಾವಿಯಾಗಿಯೇ ಅಕ್ಬರ ಅಹಮದನಗರದ ಮೇಲೆ ದಂಡೆತ್ತಿ ಹೋಗಲು ನಿರ್ಧರಿಸಿದ್ದು, ಮುರಾದನಿಗೆ ಈ ಬಗ್ಗೆ ತಿಳುವಳಿಕೆ ಸೂಚನೆಗಳನ್ನೂ ಕೊಟ್ಟಿದ್ದನು. ಮಿಯಾನ್‌ಮಂಜ್ಹುವಿನ ಆಹ್ವಾನವು ತನ್ನ ಯೋಜನೆಯನ್ನು ಈಡೇರಿಸಿಕೊಳ್ಳಲು ಈ ಒಂದು ಒಳ್ಳೆಯ ಅವಕಾಶವನ್ನು ಒದಗಿಸಿತ್ತು ಮತ್ತು ರಾಜಕುಮಾರ ಮುರಾದನು ಖಾನ್‌ದೇಶದ ದೊರೆಯಾಗಿದ್ದ ರಾಜ ಅಲಿಖಾನ್ ಮತ್ತು ಖಾನ್-ಎ-ಖಾನಾ ಅಬ್ದುಲ್‌ರಹೀಂ ಅವರೊಂದಿಗೆ ಅಹಮದನಗರದ ಕಡೆಗೆ ಕ್ರಿ.ಶ.೧೫೯೫ರಲ್ಲಿ ಸೈನ್ಯದೊಂದಿಗೆ ನಡೆದನು.[೯]

ಮೊದಲನೆಯ ಬಲಿ ಅಹಮದನಗರ. ಆಗ ಅದು ಅಂತಃಕಲಹಗಳಿಂದ ಬೇಯುತ್ತಿತ್ತು. ಆ ಸಮಯದಲ್ಲಿ ಮೊಗಲ್ ಆಕ್ರಮಣವನ್ನು ಪ್ರತಿಭಟಿಸಲು ಚಾಂದ್‌ಬೀಬಿ ನಿಂತಳು. ಅದು ಪ್ರವಾಹಕ್ಕೆ ಎದುರಾಗಿ ಈಜುವ ಕೆಲಸವಾಗಿತ್ತು. ಆ ಉದಾತ್ತ ಮಹಿಳೆಯು ಹಿಂದೆ ತನ್ನ ಬೆಂಬಲಿಗರಾಗಿದ್ದ ಹಬಶಿ ಅಧಿಕಾರಿಗಳ ವಿರೋಧವನ್ನೂ ಕಟ್ಟಿಕೊಳ್ಳಬೇಕಾಯಿತು. ಆದರೆ ಹೊರಗಿನಿಂದ ಬಾರೀವಿಪತ್ತು ಎದುರಾಗಿದ್ದರೂ ಒಳಗೆ ಗುಂಪುಗುಳಿತನ, ಪಕ್ಷಕಲಹ ಮುಂದುವರಿದೇ ಇದ್ದವು. ಅವಿವೇಕಿ ಇಲಿಗಳಂತೆ ಇಡೀ ರಾಜ್ಯದ ರಚನೆಯನ್ನು ಕಚ್ಚಿ ಹಾಳುಮಾಡುತ್ತಿದ್ದವು. ಅಲ್ಲಿನ ವಿರೋಧಪಕ್ಷಗಳು ಹೊರಗೆ ಮಹಾವಿಪತ್ತು ಸನ್ನಿಹಿತವಾಗಿರುವಾಗ ತಮ್ಮ ವೈಮನಸ್ಸನ್ನು ಮರೆತು ಒಟ್ಟಾಗಿರುವಂತೆ ತಿಳಿ ಹೇಳಿದನು. ಆದರೆ ಅವನ ಕರೆಗೆ ಯಾರೂ ಓಗೊಡಲಿಲ್ಲ.

ಉತ್ತರಾಧಿಕಾರದ ವ್ಯಾಜ್ಯದಲ್ಲಿ ಮಧ್ಯ ಪ್ರವೇಶ ಮಾಡುವಂತೆ ಮೊಗಲ್ ಯುವರಾಜ ಮುರಾದ್‌ನನ್ನು ಆಹ್ವಾನಿಸಿದಾಗಿನಿಂದ, ಅಂದರೆ ಕ್ರಿ.ಶ.೧೫೯೫ ಸೆಪ್ಟಂಬರಿನಿಂದ ಚಾಂದ್‌ಬೀಬಿಯು ಪ್ರಬಲಳಾಗಿದ್ದಳು.[೧೦] ಮೊಗಲ್‌ರ ಹಿತರಕ್ಷಣೆಗಾಗಿ ಅಬ್ದುಲ್ ರಹೀಂ ಖಾನ್-ಏ-ಖಾನಾ ಕೂಡ ಆಗ ದಕ್ಷಿಣದಲ್ಲಿದ್ದನು. ಚಾಂದ್‌ಬೀಬಿಯು ತನ್ನ ಶಕ್ತಿ ಮೀರಿ ಪರಿಸ್ಥಿತಿಯನ್ನು ಹತೋಟಿಯಲ್ಲಿಟ್ಟುಕೊಂಡಿದ್ದಳು. ದಖನಿಗಳು ಮತ್ತು ಹಬಶಿಗಳೊಂದಿಗೆ ಸ್ನೇಹ ಬೆಳೆಸಿ, ಅವರ ಸಹಕಾರವನ್ನು ಕೋರಿದಳು. ಅವರ ಸಹಾಯದಿಂದ ಆಡಳಿತವು ಸುವ್ಯವಸ್ಥೆಯಿಂದ ನಡೆಸಿಕೊಂಡು ಹೋಗಿದ್ದಳು. ಬಹದ್ದೂರ್(೧೫೯೬ರಿಂದ ೧೬೦೦ರವರೆಗೆ)ನನ್ನು ನಿಜಾಂಷಾಹಿ ವಂಶದ ಕೊನೆಯ ಸುಲ್ತಾನನನ್ನಾಗಿ ಕುಳ್ಳಿರಿಸಿದಳು. ಅಹಮದನಗರದಲ್ಲಿ ಗೊಂದಲ ಹೇಗಿದ್ದಿತೆಂದರೆ, ೧೫೮೮ರಲ್ಲಿ ಮೊಲದನೆಯ ಮುರ್ತುಜ ಬಹಾದುರನು ಸುಲ್ತಾನನೆಂದೊಡನೆಯೇ ಮೊಗಲ್‌ರು ಮುರಾದ್‌ನ ನೇತೃತ್ವದಲ್ಲಿ ೧೫೯೫ ಡಿಸೆಂಬರ್‌ನಲ್ಲಿ ಅಹಮದನಗರಕ್ಕೆ ಮುತ್ತಿಗೆ ಹಾಕಿದರು. ಚಾಂದ್‌ಬೀಬಿಯು ಅಸಾಮಾನ್ಯ ಧೈರ್ಯಪರಾಕ್ರಮಗಳನ್ನು ಮೆರೆದಳು. ಆ ಗಳಿಗೆಯಲ್ಲೂ ವಾರಸುದಾರಿಕೆಗಾಗಿ ಅಂತಃಕಲಹವು ಮುಂದುವರಿದೇ ಇದ್ದುದು ತುಂಬಾ ದುರದೃಷ್ಟದ ಸಂಗತಿಯಾಗಿತ್ತು. ಪ್ರಬಲನಾಗಿದ್ದ ಒಬ್ಬ ನೋಬಲ್ಸ್ ಮಿಯಾನ್ ಮಂಜ್ಹು ಎನ್ನುವವನು ಚಾಂದ್‌ಬೀಬಿಯು ಪಟ್ಟಕ್ಕೆ ತಂದಿದ್ದ ಬಹದ್ದೂರನಿಗೆ ಎದುರಾಗಿ ಎರಡನೆಯ ಅಹಮದನ ಹಕ್ಕುದಾರಿಕೆಯನ್ನು ಎತ್ತಿಹಿಡಿದನು. ಈ ಮಧ್ಯೆ ಮಿಯಾನ್ ಮಂಜ್ಹುವು ತನ್ನ ಪ್ರತಿಸ್ಪರ್ಧಿಯಾಗಿದ್ದ ಇಕ್ಲಾಸ್‌ಖಾನನನ್ನು ಸೋಲಿಸಿದನು ಮತ್ತು ಅಷ್ಟೊತ್ತಿಗಾಗಲೇ ಮೊಗಲ್‌ರು ಅಹಮದನಗರದ ರಾಜ್ಯದ ಬಾಗಿಲು ತಪ್ಪೆಂದು ಭಾವಿಸಿ ಪಶ್ಚಾತ್ತಾಪಪಟ್ಟನು. ಆದರೆ ಕಾಲ ಮೀರಿಹೋಗಿತ್ತು. ಆದರಿಂದಾಗಿ ಮೊಗಲ್‌ರ ಆಕ್ರಮಣದಿಂದ ರಾಜ್ಯವನ್ನು ರಕ್ಷಿಸಿಕೊಳ್ಳಲು ಅವನು ಅದೇ ಪ್ರಯತ್ನದಲ್ಲಿದ್ದ ಚಾಂದ್‌ಬೀಬಿಯ ಜೊತೆಗೆ ಈಗ ಸೇರಿಕೊಂಡು ಬಿಜಾಪುರ ಹಾಗೂ ಗೋಲ್ಕೊಂಡಗಳ ಸಹಾಯವನ್ನು ಪ್ರಾರ್ಥಿಸಿದನು. ರಾಜಪ್ರತಿನಿಧಿಯಾಗಿ ಚಾಂದ್‌ಬೀಬಿಯು ರಾಜ್ಯದ ಸಮಸ್ತ ವ್ಯವಹಾರವನ್ನು ನಿರ್ವಹಿಸುತ್ತ, ಅಹಮದನಗರದ ಕೋಟೆಯನ್ನು ಮುತ್ತಿದ್ದ ಮುರಾದ್‌ನ ವಿರುದ್ಧ ಬಲವಾಗಿ ಹೋರಾಡಲು ಈ ಪರಿಸ್ಥಿತಿಯಲ್ಲಿ ಅವಳು ಸಹಾಯಕ್ಕಾಗಿ ಆಭಂಗಖಾನ, ಮಹಮ್ಮದ್‌ಕುಲೀ ಕುತುಬ್‌ಷಾಹ ಮತ್ತು ಎರಡನೆಯ ಇಬ್ರಾಹಿಂ ಆದಿಲ್‌ಷಾಹರನ್ನು ಸಹಾಯಕ್ಕಾಗಿ ಪ್ರಾರ್ಥಿಸಿಕೊಂಡಳು. ಅವರೆಲ್ಲರೂ ಅವಳ ಪ್ರಾರ್ಥನೆಗೆ ಗೌರವ ತೋರಿದರು. ಅದರಂತೆ ಬಿಜಾಪುರದ ಎರಡನೇ ಇಬ್ರಾಹಿಂ

ಆದಿಲ್‌ಷಾಹನು ಅವನು ಮಹಾನ ದಂಡನಾಯಕ ಸಹೇಲಖಾನ್ ಎನ್ನುವನ ನೇತೃತ್ವದಲ್ಲಿ ಮೂವತ್ತು ಸಾವಿರ ಅಶ್ವರೋಹಿದಳವೊಂದನ್ನೂ ಮತ್ತು ಗೋಲ್ಕೊಂಡದ ಮಹಮ್ಮದ್ ಕುಲೀ ಕುತುಬ್‌ಷಾಹನು ಏಳುಸಾವಿರ ಅಶ್ವರೋಹಿದಳವೊಂದನ್ನೂ ಕಳುಹಿಸಿದರು.[೧೧] ಇಕ್ಲಾಸ್‌ಖಾನನೂ ಮತ್ತು ಮಿಯಾನ್ ಮಂಜ್ಜುವೂ ಬಿಜಾಪುರ ಹಾಗೂ ಗೋಲ್ಕೊಂಡಗಳ ಸೈನ್ಯದೊಂದಿಗೆ ಚಾಂದ್‌ಬೀಬಿಯ ನೇರವಿಗಾಗಿ ಹೋದರು.

ಮಹಮದನಗರದ ರಕ್ಷಣೆಗಾಗಿ ಇಷ್ಟೊಂದು ಬಾರಿ ಸೈನ್ಯ ಬರುತ್ತಿರುವುದನ್ನು ಕೇಳಿದ ಮುರಾದ್ ಮತ್ತು ಖಾನ್- ಏ-ಖಾನಾನಿಗೆ ಆತಂಕ ಉಂಟಾಯಿತು. ಬಿಜಾಪುರ ಮತ್ತು ಗೋಲ್ಕೊಂಡದ ಸೈನ್ಯಗಳು ಅಹಮದನಗರಕ್ಕೆ ಸಹಾಯ ಮಾಡಲು ಬರುವ ಪೂರ್ವದಲ್ಲಿಯೇ ಮೊಗಲ್‌ರು ಅಹಮದನಗರದ ಕೋಟೆ ವಶಪಡಿಸಿಕೊಳ್ಳಲು ಪ್ರಯತ್ನಿಸಿದರು. ಅದಕ್ಕಾಗಿಯೇ ಅವರು ಕೋಟೆಯ ಸುರಂಗಗಳಲ್ಲಿ ಐದು ಸಿಡಿಮದ್ದು ಪಡೆಗಳನ್ನು ಅಡಗಿಸಿಟ್ಟಿದ್ದರು. ಚಾಂದ್‌ಬೀಬಿಯ ಶ್ರಮಕ್ಕೆ ಅಕ್ಬರ್‌ನ ಆಸ್ಥಾನದ ನೋಬಲ್ ಅತ್ಯಂತ ಮೆಚ್ಚುಗೆಯನ್ನು ವ್ಯಕ್ತಪಡಿಸಿದನು. ನೋಬಲನಾದ ಖ್ವಾಜಾ ಮಹಮ್ಮದ ಖಾನ್ ಶಿರಾಜಿಯು ಅಹಮದನಗರದ ವಿರುದ್ಧ ಮಾಡುವ ಷಡ್ಯಂತರಗಳ ಬಗ್ಗೆ ಸಮಯಕ್ಕೆ ಸರಿಯಾಗಿ ಸುದ್ದಿಯನ್ನು ತಲುಪಿಸುತ್ತಿದ್ದನು. ಮೊಗಲ್‌ರ ಸಿಡಿಮದ್ದಿನ ಪಡೆಗಳ ಬಗ್ಗೆ ತಿಳಿದ ಮರುಕ್ಷಣವೇ ಚಾಂದ್‌ಬೀಬಿಯು ಅವುಗಳನ್ನು ಶೋಧಿಸಲು ಪ್ರಾರಂಭಿಸಿದಳು. ಆದರೆ ಎರಡು ಸಿಡಿಮದ್ದು ಪಡೆಗಳು ಮಾತ್ರ ದೊರೆತವು ಅವುಗಳನ್ನು ನಾಶಪಡಿಸಿದಳು. ಇನ್ನುಳಿದ ಮೂರು ಸಿಡಿಮದ್ದು ಪಡೆಯನ್ನು ಶೋಧಿಸಬೇಕಾಗಿತ್ತು. ಮುರಾದ್‌ನ ಅನುಮತಿಯಂತೆ ಅವುಗಳನ್ನು ಸ್ಫೋಟಿಸಲಾಯಿತು. ಗುಂಡುಮದ್ದುಗಳ ಸ್ಫೋಟದಿಂದ ಕೋಟೆಯು ಸುಮಾರು ೫೦ ಅಡಿಗಳವರೆಗೂ ಅಲುಗಾಡಿತು. ಎಲ್ಲ ಸೈನಿಕರಿಗೆ ಮೊದಲೇ ಈ ಆಶ್ಚರ್ಯದ ಬಗ್ಗೆ ಅರಿವಿತ್ತು. ಆದ್ದರಿಂದ ಅವರಿಗೆ ಯಾವುದೇ ರೀತಿಯ ಹಾನಿಯಾಗಲಿಲ್ಲ. ಆದರೆ ಕೋಟೆಯ ಒಂದು ಭಾಗವು ಸೀಳಿಕೊಂಡಿತಾದರೂ, ಮೊಗಲ್ ಸೈನ್ಯವು ಅದರೊಳಕ್ಕೆ ಪ್ರವೇಶಿಸಲು ಸಾಧ್ಯವಾಗಲಿಲ್ಲ. ಇದಕ್ಕೆ ಕಾರಣ ಚಾಂದ್‌ಬೀಬಿಯು ಮುಖವಾಡ ಧರಿಸಿ, ಕೋಟೆಯ ಹೊರಗಡೆ ಬಂದು ಹಾಳಾದ ಗೋಡೆಯ ಭಾಗಕ್ಕೆ ನಿಂತಳು. ಚಾಂದ್‌ಬೀಬಿಯು ಮೊಗಲ್‌ರ ದಾಳಿಗೆ ಹೆದರದೆ ಯುದ್ಧ ಮಾಡುತ್ತಿದ್ದಳು. ಅದನ್ನು ಕಂಡ ಸೈನಿಕರು ಧೈರ್ಯದಿಂದ ವೈರಿಗಳೊಂದಿಗೆ ನಿಷ್ಠೆಯಿಂದ ಹೋರಾಡಿದರು. ಯುದ್ಧವು ಸಂಜೆಯವರೆಗೂ ಮುಂದುವರೆಯಿತು. ಚಾಂದ್‌ಬೀಬಿಯು ಸಿಡಿಮದ್ದಿನ ಗುಂಡುಗಳಿಂದ ಕೋಟೆಯ ಮುರಿದುಬಿದ್ದ ಭಾಗಗಳನ್ನು ಬೆಳಕಾಗುವರೆಗೆ ಪುನಃ ಮೊದಲಿಗಿಂತ ಮೂರು ಅಡಿ ಎತ್ತರಕ್ಕೆ ನಿರ್ಮಿಸಿದಳು. ಹೀಗಾಗಿ ಆ ಕೋಟೆಯನ್ನು ವಶಪಡಿಸಿಕೊಳ್ಳುವ ಕೆಲಸ ಮತ್ತೆ ಮೊದಲಿನಷ್ಟೇ ದುಷ್ಕರವಾಯಿತು. ಈ ಕೋಟೆಗೆ ಮುತ್ತಿಗೆಯು ಕಳೆದು ಮೂರು ತಿಂಗಳವರೆಗೂ ಮುಂದುವರೆಯಿತು. ಆದ್ದರಿಂದ ೧೫೯೬ ಫೆಬ್ರವರಿ ೨೦ರಂದು ಯುವರಾಜ ಮುರಾದ್‌ನು ಬಲವಾದ ಆಕ್ರಮಣ ಮಾಡಿದನು. ಚಾಂದ್‌ಬೀಬಿಯೇ ಅವನನ್ನು ಸೋಲಿಸಿ ಹಿಂದಕ್ಕಟ್ಟಿದಳು.[೧೨] ಮೊಗಲ್ ಸೇನೆಗೆ ತುಂಬಾ ಹಾನಿಯುಂಟಾಯಿತು, ಅದೊಂದು ಮಹಾದಿನವಾಗಿತ್ತು. ಏಕೆಂದರೆ ಮೊಗಲ್‌ರಿಗೆ ಯಾವ ಗಂಡಸೂ ಮಾಡದಿದ್ದನ್ನು ಚಾಂದ್‌ಬೀಬಿ ಮಾಡಿ ತೋರಿಸಿದಳು. ಮುರಾದ್‌ನು ಸಂಧಿಯ ಮಾತುಕತೆಗಳಿಗೆ ತೊಡಗಿದನು. ಚಾಂದ್‌ಬೀಬಿಗೂ ಆಹಾರ ಸರಬರಾಜಿನ ಅಭಾವವನ್ನು ಎದುರಿಸಬೇಕಾಗಿ ಬಂದಿತು. ಹೀಗಾಗಿ ದುರ್ಗದ ರಕ್ಷಣೆಯ ಬಗ್ಗೆ ತೀವ್ರ

ಭಯಾತಂಕದ ಪರಿಸ್ಥಿತಿಯನ್ನು ಎದುರಿಸಬೇಕಾಗಿತ್ತು. ಒಟ್ಟಿನಲ್ಲಿ ಎರಡೂ ಪಕ್ಷಗಳೂ ಯುದ್ಧವನ್ನು ನಿಲ್ಲಿಸಲು ಒಂದು ಅವಕಾಶವನ್ನು ಕಾಯುತ್ತಿದ್ದವು. ಅಂತೂ ಕೊನೆಗೆ, ಅವರೀರ್ವರ ಮಧ್ಯೆ ಮೊಗಲ್‌ರ ಪ್ರಭುತ್ವವನ್ನು ಒಪ್ಪಿಕೊಳ್ಳುವ ಮತ್ತು ಅಹಮದನಗರವು ಬೇರಾರನ್ನು ಬಿಟ್ಟುಕೊಡಬೇಕೆನ್ನುವ ಷರತ್ತುಗಳ ಆಧಾರದ ಮೇಲೆ ೧೫೯೬ರಲ್ಲಿ ಸಂಧಿಯಾಯಿತು. ಮೊಗಲ್‌ರು ಅಹಮದನಗರ ಕೋಟೆಯಿಂದ ಹಿಂದೆ ತಿರುಗಿ ಹೋದರು. ಚಾಂದ್‌ಬೀಬಿಯು ನಿಜಾಂಷಾಹಿ ರಾಜ್ಯವನ್ನು ಸಂಪೂರ್ಣ ವಿನಾಶದಿಂದ ರಕ್ಷಿಸಿದಳು.

ದಕ್ಷಿಣ ಭಾರತದ ಇತಿಹಾಸ ಲೇಖಕರು ಇಂತಹ ಒಂದು ಬೃಹತ್ತಾದ ಸೈನ್ಯವು ಹಿಂದೆ ನಡೆದ ತಾಳಿಕೋಟೆ ಕದನದಲ್ಲೂ ಸೇರಿರಲಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಮೊಗಲ್ ಇತಿಹಾಸಕಾರರು ಹೇಳಿದ್ದಂತೆ ಮುರಾದ್‌ನು ದಂಡಯಾತ್ರೆಯಿಂದ ಮರಳಿ ಬಂದ ಮೇಲೆ ತನ್ನ ಸೋಲನ್ನು ಮನಸಾರೆ ಒಪ್ಪಿಕೊಂಡದ್ದೂ ಅಲ್ಲದೆ ಚಾಂದ್‌ಬೀಬಿಯ ಶೌರ್ಯತನಕ್ಕೆ ತುಂಬಾ ಹೆಮ್ಮೆಪಟ್ಟನು. ಈ ಯುದ್ಧದಲ್ಲಿನ ಅವಳ ರಕ್ಷಣಾ ನೀತಿಗೆ ಮೆಚ್ಚಿ ಅವಳನ್ನು ಮುಂದೆ ''ಚಾಂದ್‌ಸುಲ್ತಾನಾ'' ಎಂದು ಬಿರುದು ನೀಡಿದನು.[೨೩]

೫.೧.೨ ಅಹಮದನಗರದಲ್ಲಿ ಸೋಟೆಲ್ಸ್‌ರ ಶ್ರೀಮಂತರ ಬಂಡಾಯ

ಚಾಂದ್‌ಬೀಬಿಯ ಅಹಮದನಗರದ ಮೇಲಿನ ಗಂಡಾಂತರದಿಂದ ರಕ್ಷಣೆ ಪಡೆದುಕೊಂಡು ಬಹದ್ದೂರನನ್ನು ಅಹಮದನಗರದ ಸುಲ್ತಾನನೆಂದು ಘೋಷಿಸಲಾಯಿತು. ಜೊತೆಗೆ ಮಹಮ್ಮದ್‌ಖಾನನನ್ನು ಪ್ರಧಾನ ಮಂತ್ರಿಯನ್ನಾಗಿ ನೇಮಿಸಲಾಯಿತು. ಆದರೆ ಅಹಮದನಿಗೆ ಉಳಿದ ಸ್ಪರ್ಧಿಗಳಿಗಿಂತ ಹೆಚ್ಚಿನ ಹಕ್ಕಿತ್ತೆಂದೂ ಅವನನ್ನೇ ಸುಲ್ತಾನನ್ನಾಗಿ ಮಾಡಲಾಗುತ್ತದೆಯೆಂದೂ ಮಿಯಾನ್ ಮಂಜ್ಜುವು ನಿರೀಕ್ಷಿಸಿದನು. ಇದು ಶಾಂತಿ ಸೌಹಾರ್ದ ಮಾರ್ಗಗಳಿಂದ ಸಾಧ್ಯವಾಗದಿದ್ದಾಗ ಅವನು ಅದನ್ನು ಈಗ ಬಲ ಪ್ರದರ್ಶನದಿಂದ ಸಾಧಿಸಲು ಬಯಸಿದನು. ಇದನ್ನು ಅರಿತು ಚಾಂದ್‌ಸುಲ್ತಾನಳು ಪುನಃ ಎರಡನೆಯ ಇಬ್ರಾಹಿಂ ಆದಿಲ್‌ಷಹಾನನ್ನು ಸಹಾಯ ಮಾಡಲು ಪ್ರಾರ್ಥಿಸಿಕೊಂಡಳು. ಅವನು ಮಿಯಾನ್ ಮಂಜ್ಜುವನ್ನು ಅಹಮದನೊಂದಿಗೆ ಬಿಜಾಪುರಕ್ಕೆ ತೆರಳಲು ಹೇಳಿದನು. ಅವನು ಆ ಪ್ರಕಾರ ಅಲ್ಲಿಗೆ ತೆರಳಿದಾಗ ಅವರಿಬ್ಬರನ್ನು ಬಿಜಾಪುರದ ಸೇವೆಯಲ್ಲಿ ನೇಮಕ ಮಾಡಿಕೊಳ್ಳಲಾಯಿತು.

ಚಾಂದ್‌ಸುಲ್ತಾನಳ ಕಷ್ಟಗಳು ಮಿಯಾನ್ ಮಂಜ್ಜು ಮತ್ತು ಮಹಮದನು ಅಹಮದನಗರವನ್ನು ಬಿಟ್ಟು ತೊಲಗಿದ್ದ ಮಾತ್ರಕ್ಕೆ ಪರಿಹಾರಗೊಳ್ಳಲಿಲ್ಲ. ಇನ್ನೂ ಹೆಚ್ಚಿನ ಕಷ್ಟಗಳನ್ನು ಅವಳು ಮುಂದೆ ಎದುರಿಸಬೇಕಾಗಿ ಬಂದಿತು. ಬಹದ್ದೂರರ ಪ್ರಧಾನ ಮಂತ್ರಿಯಾದ ಮಹಮ್ಮದ್‌ಖಾನನ ದುರಹಂಕಾರ ಹಾಗೂ ಅತಿರೇಕಗಳು ಅವಳಿಗೂ ಗಣ್ಯಕುಲೀನವರ್ಗದವರಿಗೂ ತೀರಾ ಅಸಹನೀಯವಾಯಿತು. ಈ ಕಷ್ಟದಿಂದ ಪಾರುಮಾಡುವಂತೆ ಅವಳು ಮತ್ತೆ ಎರಡನೆಯ ಇಬ್ರಾಹಿಂ ಆದಿಲ್‌ಷಹಾನನ್ನು ಪ್ರಾರ್ಥಿಸಿಕೊಂಡಳು. ಇಬ್ರಾಹಿಂನು ಸುಹೇಲಖಾನ ಎಂಬುವನ ನಾಯಕತ್ವದಲ್ಲಿ ಒಂದು ಪ್ರಬಲವಾದ ಸೈನ್ಯವನ್ನು ಕಳುಹಿಸಿಕೊಟ್ಟು, ಚಾಂದ್‌ಸುಲ್ತಾನ್‌ಗಳಿಗೆ ಅಗತ್ಯವಾದ ಎಲ್ಲ ಸಹಾಯವನ್ನು ಒದಗಿಸಬೇಕೆಂಬ ಸೂಚನೆಯನ್ನಿತ್ತನು. ಮಹಮ್ಮದ್‌ಖಾನನ್ನು ಕೈಸೆರೆಯಾಗಿಸಿಕೊಂಡು, ನಾಲ್ಕು ತಿಂಗಳ ಕಾಲ ಅವನನ್ನು ಅಹಮದನಗರದ ಕೋಟೆಯಲ್ಲಿ ಬಂದಿಯಾಗಿಟ್ಟನು. ಇಂತಹ ವಿಷಮಸ್ಥಿತಿಗೆ ಸಿಕ್ಕಿಕೊಂಡು ಮಹಮ್ಮದಖಾನ ಈಗ ಮೊಗಲ್‌ರ ಸಹಾಯವನ್ನು ಬೇಡಿದನು. ಆದರೆ

ಕೋಟೆಯ ರಕ್ಷಣೆಗಾಗಿ ಪಾಳೆಯವಿದ್ದ ಸೈನ್ಯವು ಈ ಬಗ್ಗೆ ಅಸಮಾಧಾನಗೊಂಡು, ಅವನನ್ನು ಬಂಧಿಸಿ ಚಾಂದ್‌ಸುಲ್ತಾನಳ ವಶಕ್ಕೆ ಒಪ್ಪಿಸಿತು. ಅವಳು ಮಹಮ್ಮದಖಾನನನ್ನು ಪ್ರಧಾನಮಂತ್ರಿ ಸ್ಥಾನದಿಂದ ಕೆಳಗಿಳಿಸಿ ಅವನ ಸ್ಥಾನದಲ್ಲಿ ಅಭಂಗ್‌ಖಾನನನ್ನು ನೇಮಿಸಿದಳು. ಈ ರೀತಿ ಅವಳು ತನ್ನ ರಾಜ್ಯದ ಆಂತರಿಕ ಶತ್ರುವಿನಿಂದ ಪಾರಾದಳು. ಆದರೆ ಅವಳಿಗೆ ಮೊಗಲ್‌ರೊಂದಿಗಿನ ಹಿಂದಿನ ಕಷ್ಟ ಮರುಕಳಿಸಿತು.

ಮೊಗಲ್‌ರೊಂದಿಗೆ ಅವಳಿಗಿದ್ದ ರಾಜಕೀಯ ಸಂಬಂಧ ತೀವ್ರವಾಗಿ ಅತೃಪ್ತಿಕರವೆನಿಸಿತು. ಸ್ನೇಹಸೌಹಾರ್ದಗಳು ದೂರದ ವಿಷಯವೇ ಆಗಿದ್ದವು. ಒಪ್ಪಂದದ ನಿಯಮಗಳ ಪ್ರಕಾರ ಯಾವ ಒಪ್ಪಂದವೂ ಆಗಿಲ್ಲದಿದ್ದ ಅಹಮದನಗರಕ್ಕೆ ಸೇರಿದ್ದ 'ಪಾತ್ರಿ' ಮುಂತಾದ ಕೆಲವು ಪ್ರದೇಶಗಳನ್ನು ಅವರು ಆಕ್ರಮಿಸಿಕೊಂಡಿದ್ದನು. ಒಪ್ಪಂದದ ಪ್ರಕಾರ ಮೊಗಲ್‌ರಿಗೆ ಬಿಟ್ಟು ಕೊಡಬೇಕಾಗಿದ್ದ ಬೇರಾರಿನ ಗವಿಲ್‌ಗಡ ಮತ್ತು 'ನರ್ನಾಲ' ಕೋಟೆಗಳು ಇನ್ನೂ ಅಹಮದನಗರದ ಅಧಿಕಾರಿಗಳ ವಶದಲ್ಲೇ ಇದ್ದವು. ಹೀಗೆ ಯುದ್ಧ ಕೈಗೊಳ್ಳಲು ಸಾಕಾದಷ್ಟು ಕಾರಣಗಳು ಆಗಲೇ ಇದ್ದ ಮಹಮ್ಮದಖಾನನು ಸಹಾಯಕ್ಕಾಗಿ ಮೊಗಲ್‌ರಿಗೆ ಮಾಡಿದ ಪ್ರಾರ್ಥನೆಯು, ಮೊಗಲ್‌ರಿಗೆ ಆಕ್ರಮಣ ನಡೆಸಲು ಇನ್ನೊಂದು ಪ್ರಮುಖ ಕಾರಣವನ್ನು ಒದಗಿಸಿತ್ತು.

ಅಹಮದನಗರದ ಪರಿಸ್ಥಿತಿ ಗಂಭೀರವಾಗಿದ್ದುದನ್ನು ಅರಿತು, ಚಾಂದ್‌ಸುಲ್ತಾನಳು ಬಿಜಾಪುರ ಮತ್ತು ಗೋಲ್ಕೊಂಡಗಳನ್ನು ಸಹಾಯಕ್ಕೆ ಕೋರಿ ತುರ್ತು ಸಂದೇಶ ಕಳುಹಿಸಿದಳು. ಬಿಜಾಪುರದ ಎರಡನೆಯ ಇಬ್ರಾಹಿಂ ಆದಿಲ್‌ಷಾಹನು ಸುಹೇಲಖಾನನನ್ನು ಸೇನೆಯೊಂದಿಗೆ ಕಳಿಸಿಕೊಟ್ಟನು. ಅದೇ ರೀತಿಯಾಗಿ ಗೋಲ್ಕೊಂಡದ ಮಹಮ್ಮದ್ ಕಲೀ ಕುತುಬ್‌ಷಾಹನೂ ಭಾರೀ ಸೇನೆಯೊಂದಿಗೆ ಮಹದೀಖಾನನನ್ನು ಕಳುಹಿಸಿದನು. ಅವರಿಬ್ಬರೂ ಅಗತ್ಯವಾದ ಸಹಾಯವನ್ನು ಒದಗಿಸಿದರು. ಅರವತ್ತು ಸಹಸ್ರ ಅಶ್ವಾರೋಹಿಗಳಿಂದ ಕೂಡಿದ ಮಿತ್ರ ಸೈನ್ಯವು ಬೇರಾರಿನ ಅಭಿಮುಖವಾಗಿ ಪ್ರಯಾಣ ಮಾಡಿತು ಮತ್ತು ಗೋದಾವರಿಯ ದಂಡೆಯ ಮೇಲೆ 'ಸೋನ್‌ಪೇಟ್'ನ ಸಮೀಪದಲ್ಲಿ ಅವರಿಗೂ ಮೊಗಲ್‌ರಿಗೂ ಉಗ್ರವಾದ ಯುದ್ಧ ಎರಡು ದಿನಗಳ ಕಾಲ ನಡೆಯಿತು. ಈ ಯುದ್ಧದಲ್ಲಿ ಮೊಗಲ್‌ರು ಸೋತು ೧೫೯೭ ಜನವರಿ ೨೭ರಂದು ಮೊಗಲ್ ಸೈನ್ಯವು ಪಲಾಯನ ಮಾಡಿತು.[೧೫] ಅದು ಚಾಂದ್‌ಸುಲ್ತಾನಳಿಗೆ ದೊರೆತ ಎರಡನೆಯ ಮಹಾವಿಜಯವಾಗಿತ್ತು. ಆದಾಗ್ಯೂ ರಾಜಕುಮಾರ ಮುರಾದ್ ಮತ್ತು ಖಾನ್-ಎ-ಖಾನಾನು ಮಧ್ಯೆ ತಲೆದೋರಿದ ತೀವ್ರ ಭಿನ್ನಾಬಿಪ್ರಾಯಗಳ ದೆಸೆಯಿಂದ ಮೊಗಲ್‌ರು ವಿಜಯ ಗಳಿಸುವಲ್ಲಿ ವಿಫಲರಾದರು. ಈ ಕಾರಣದಿಂದ ಅಕ್ಬರನು ಅಬ್ದುಲ್ ಫಜಲನನ್ನು ದಂಡನಾಯಕನನ್ನು ನೇಮಿಸಿ ದಖನ್ನಿಗೆ ಕಳುಹಿಸಿದನು ಮತ್ತು ಖಾನ್-ಎ-ಖಾನನನ್ನು ಹಿಂದಕ್ಕೆ ಕರೆಸಿಕೊಳ್ಳಬೇಕಾಯಿತು.

### ೫.೧.೩ ದಾನಿಯಾಲನ ಜೊತೆ ಯುದ್ಧ

ಮೊಗಲ್ ಸಾಮ್ರಾಜ್ಯದ ಯುವರಾಜ ಮುರಾದ್‌ನು ಅಹಮದನಗರದ ಚಾಂದ್‌ಸುಲ್ತಾನಳ ಎದುರಿಗೆ ಎರಡು ಬಾರಿ ಮುಖಭಂಗ ಅನುಭವಿಸಿದನು. ಮುರಾದ್‌ನು ಬಲಿಷ್ಠವಾದ ಸೈನ್ಯವನ್ನು ಹೊಂದಿದ್ದರು. ಅಹಮದನಗರದ ವಿರುದ್ಧ ಜಯ ಗಳಿಸಲು ಸಾಧ್ಯವಾಗಲಿಲ್ಲ. ಆದಕಾರಣ ಅಹಮದನಗರದ ಮೇಲೆ ತನ್ನ ಪ್ರಭುತ್ವವನ್ನು ಸಾಧಿಸಲು ಹರಸಾಹಸ ಮಾಡಿದನು. ಆದರೆ ಎರಡು ಬಾರಿ ವಿಜಯದ ಭಾಗ್ಯ ಅವನಿಗೆ ದೊರೆಯಲಿಲ್ಲ.

ಅಹಮದನಗರದಲ್ಲಿ ಚಾಂದ್‌ಸುಲ್ತಾನಳ ಮತ್ತು ಅಭಂಗ್‌ಖಾನನ ಮಧ್ಯೆ ಮನಸ್ತಾಪ ಹೊಂದಿದ್ದರಿಂದ ಅದರ ಲಾಭ ಪಡೆದು ಮುರಾದ್‌ನು ಮೂರನೇ ಬಾರಿಗೆ ಅಹಮದನಗರದ ಮೇಲೆ ದಾಳಿಮಾಡಿ ಆ ರಾಜ್ಯವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ವಿಧಿ ಅವನನ್ನು ಬಿಡಲಿಲ್ಲ. ಏಕೆಂದರೆ ೧೫೯೯ ಮೇ ತಿಂಗಳಲ್ಲಿ ಯುವರಾಜ ಮುರಾದ್‌ನು ಅತಿಪಾನದಿಂದ ಮರಣ ಹೊಂದಿದನು.[illegible] ಯುವರಾಜನ ಮುರಾದ್‌ನ ಸಾವಿನ ಸಮಾಚಾರ ಕೇಳಿದ ಅಕ್ಬರನಿಗೆ ತುಂಬಾ ದುಃಖವಾಯಿತು. ಈ ಸನ್ನಿವೇಶದಲ್ಲಿ ಅಕ್ಬರನ ಕೊನೆಯ ಮಗ ದಾನಿಯಾಲನನ್ನೂ ಮತ್ತು ಖಾನ ಏ ಖಾನನನ್ನು ದಖನ್ನಿಗೆ ಕಳುಹಿಸಿಕೊಟ್ಟದ್ದಲ್ಲದೆ ಸಮರವನ್ನು ತೀವ್ರತೆಯಿಂದ ಮುಂದುವರಿಸುವ ಉದ್ದೇಶದಿಂದ ಚಕ್ರವರ್ತಿ ಅಕ್ಬರನು ತಾನೇ ದಕ್ಷಿಣಕ್ಕೆ ದಂಡೆತ್ತಿ ಹೊರಟು ಬರ್ಹಾಂಪುರದಲ್ಲಿ ಮೊಕ್ಕಾಂ ಮಾಡಿದನು. ಅಲ್ಲಿಂದ ಅಸೀರ್ ಅನ್ನು ಆಕ್ರಮಿಸಲು ಒಂದು ಸೈನ್ಯವನ್ನು ಕಳುಹಿಸಲಾಯಿತು ಮತ್ತು ಯುವರಾಜ ದಾನಿಯಾಲನನ್ನೂ ಖಾನ್-ಏ-ಖಾನನನ್ನೂ ಅಹಮದನಗರದ ವಿರುದ್ಧ ದಂಡಯಾತ್ರೆಗಾಗಿ ಕಳುಹಿಸಲಾಯಿತು.

ಚಾಂದ್‌ಸುಲ್ತಾನಳು ಮತ್ತು ಅಭಂಗ್‌ಖಾನನ ನಡುವೆ ಆಂತರಿಕ ಸಮಸ್ಯೆಯನ್ನು ನಿಲ್ಲಿ ಮೊಗಲ್‌ರನ್ನು ಎದುರಿಸಲು ದಂಡಯಾತ್ರೆ ಕೈಗೊಂಡನು. ಆದರೆ ''ತನ್ನ ಸೈನ್ಯ ವಿನ್ಯಾಸವನ್ನು ಮೀರಿಸಿದ್ದ ಮೊಗಲ್‌ರ ದಳ ನಿಯೋಜನೆಯಿಂದ ತಪ್ಪಿಸಿಕೊಂಡು ಮೊಗಲ್‌ರ ಸೈನ್ಯದ ಶಕ್ತಿಯನ್ನು ತಡೆಯಲಾಗದೆ'' ಚಾಂದ್‌ಸುಲ್ತಾನಳ ಜೊತೆ ತಮ್ಮ ಭಿನ್ನಾಭಿಪ್ರಾಯಗಳ ಒಂದು ಸೌಹಾರ್ದಯುತ ಒಪ್ಪಂದ ಮಾಡಿಕೊಳ್ಳುವ ಉದ್ದೇಶದಿಂದ, ಅಹಮದಾಬಾದಿಗೆ ಹಿಂದಿರುಗಿದನು. ಇದು ಸಾಧ್ಯವಾಗದಿದ್ದಾಗ ಅಲ್ಲಿಂದ ಜುನ್ನರಿಗೆ ತೆರಳಿದನು. ಮೊಗಲ್‌ರು ಅಹಮದನಗರದ ಮೇಲೆ ದಾಳಿ ಮಾಡಿದರು.

ಈ ಕಷ್ಟ ಪರಿಸ್ಥಿತಿಯಲ್ಲಿ ಚಾಂದ್‌ಬೀಬಿಯು ತನ್ನ ಸೈನ್ಯದಲ್ಲಿನ ಉನ್ನತ ಅಧಿಕಾರಿಯಾದ ಜೀತಖಾನನ ಸಲಹೆ ಕೇಳಿ ಕೊನೆಗೆ ಅವಳು ತನ್ನ ಹಿಂದಿನ ಅನುಭವಗಳಂತೆ ಬಿಜಾಪುರ ಮತ್ತು ಗೋಲ್ಕೊಂಡಗಳಿಗೆ ನೆರವು ಕೋರಿ ತುರ್ತು ಸಂದೇಶ ಕಳುಹಿಸಿದಳು. ಆದರೆ ಬಿಜಾಪುರದ ಎರಡನೇ ಇಬ್ರಾಹಿಂ ಆದಿಲ್‌ಷಾಹನು ಹಳೆಯ ರಾಜಧಾನಿಯ ಹೊರವಲಯದಲ್ಲಿ 'ಸೌರಸಪುರ' ಎಂಬ ಹೊಸ ರಾಜಧಾನಿಯನ್ನು ಕಟ್ಟುವುದರಲ್ಲಿ ಮಗ್ನನಾದನು ಮತ್ತು ಗೋಲ್ಕೊಂಡದ ಮಹಮ್ಮದ ಕಲೀ ಕುತುಬಷಹನು ತೆಲಂಗಾಣದ ವ್ಯವಹಾರಗಳಲ್ಲಿ ಮುಳುಗಿದನು. ಆದಕಾರಣ ಚಾಂದ್‌ಸುಲ್ತಾನಗಳಿಗೆ ಅವರು ಸೈನಿಕ ಬೆಂಬಲ ನೀಡಲು ಸಾಧ್ಯವಾಗಲಿಲ್ಲ. ಆದರೆ ಚಾಂದ್‌ಸುಲ್ತಾನಳ ಎಲ್ಲ ನಂಬಿಕೆಗಳು ಗಾಳಿಗೆ ತೂರಿದಂತಾಯಿತು. ಇದರಿಂದ ನಿರಾಶೆಗೊಂಡ ಚಾಂದ್‌ಬೀಬಿಯು ಮೊಗಲ್‌ರ ಆಕ್ರಮಣ ಮುಂದುವರಿಯಿತು. ದಾನಿಯಾಲನು ಹಿಂದಿನ ಯುದ್ಧದ ರಣತಂತ್ರವನ್ನು ಉಪಯೋಗಿಸಿದನು. ಅಂದರೆ ಮುರಾದ್‌ನಂತೆ ಸುರಂಗ ಮಾರ್ಗದಲ್ಲಿ ಸಿಡಿಮದ್ದಿನ ಪಡೆಯನ್ನು ಇಟ್ಟು ಸ್ಫೋಟ ಮಾಡಲಾಯಿತು. ಈ ಸ್ಫೋಟದಿಂದ ಕೋಟೆಯ ಗೋಡೆಯು ಒಡೆದು ಹೋಯಿತು. ಸುರಂಗ ಮಾರ್ಗದಿಂದ ಮೊಗಲ್‌ರು ಕೋಟೆ ಪ್ರವೇಶಿಸಿದರು. ಈ ವಿಷಯ ತಿಳಿದು ಚಾಂದ್‌ಸುಲ್ತಾನಳು ಮೊಗಲ್‌ರಿಂದ ಬಹಳ ದಿನಗಳವರೆಗೆ ಕೋಟೆಯನ್ನು ರಕ್ಷಣೆ ಮಾಡಲು ಸಾಧ್ಯವಿಲ್ಲವೆಂದು ಅರಿತು ಕೋಟೆಯ ರಕ್ಷಣಾ ಸೈನ್ಯಸಿಬ್ಬಂದಿಯನ್ನೂ ಮತ್ತು

ಅಪ್ರಾಪ್ತವಯಸ್ಕನಾದ ಬಹದ್ದೂರ್ ಸುಲ್ತಾನನನ್ನು ಯಾವೊಂದು ಆತಂಕಕ್ಕೂ ಒಳಪಡಿಸದೆ ಇಲ್ಲಿಂದ ಜುನ್ನರ ಕೋಟೆಗೆ ತೆರಳಲು ಸೂಚಿಸಿದಳು. ಜೊತೆಗೆ ಕೋಟೆಯನ್ನು ಮೊಗಲ್‌ರಿಗೆ ಒಪ್ಪಿಸುವುದು ಉಚಿತ ಕ್ರಮವೆಂದು ತಿಳಿಸಿದಳು. ಅವಳು ಶರಣಾಗಿ ಅಹಮದನಗರವನ್ನು ಬಿಟ್ಟು ಸ್ವತಂತ್ರ ಮನೆತನವಾಗಿ ಇರಲು ಇಚ್ಛಿಸಿದಳು ಎಂದು ಅವಳ ದಂಡನಾಯಕ 'ಜೀತಖಾನ' ತಪ್ಪು ಗ್ರಹಿಸಿಕೊಂಡು ಒಮ್ಮೆಲೇ ಕೋಪಗೊಂಡು ಅವನ ನೇತೃತ್ವದಲ್ಲಿ ಒಂದು ಗುಂಪು ಅವಳ ವಾಸದ ಕೊಠಡಿಗೆ ಮುತ್ತಿಗೆ ಹಾಕಿ ಕ್ರಿ.ಶ.೧೫೯೯ರಲ್ಲಿ ಚಾಂದ್‌ಸುಲ್ತಾನಳನ್ನು ಕೊಂದು ಹಾಕಿದರು.[೧೭] ಚಾಂದ್‌ಸುಲ್ತಾನಳ ಸಾವಿನೊಂದಿಗೆ ಅಹಮದನಗರ ರಾಜ್ಯದ ಭವಿಷ್ಯದ ಬೆಳಕು ನಂದಿಹೋಯಿತು. ಅಲ್ಲಿಂದ ಮುಂದಿನ ತಿಂಗಳಲ್ಲೇ ಮೊಗಲ್‌ರು ಕೋಟೆಯನ್ನು ಮುತ್ತಿ ಆಕ್ರಮಿಸಿಕೊಂಡರು.

**೫.೨ ಚಾಂದ್‌ಬೀಬಿಯ ಮರಣ (೧೫೯೯)**

ಚಾಂದ್‌ಬೀಬಿಯು ಮರಣ ಹೊಂದಿದ ಬಗ್ಗೆ ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯಗಳು ಹೊಂದಿವೆ. ಅಹಮದನಗರದ ಇತಿಹಾಸದಲ್ಲಿ ಚಾಂದ್‌ಸುಲ್ತಾನಳ ಹೆಸರು ಎಲ್ಲ ಮಹಿಳೆಯರಿಗೆ ಮತ್ತು ಜನಸಾಮಾನ್ಯರಿಗೆ ಸ್ಫೂರ್ತಿದಾಯಕವಾಗಿತ್ತು. ಇವಳ ಸಾವಿನ ಬಗ್ಗೆ ಫೆರಿಸ್ತಾ ಇತಿಹಾಸಕಾರರ ಮತ್ತು ರಫೀವುದ್ದಿನ್ ಶಿರಾಜಯ ಹೇಳಿದಂತೆ ಮೊಗಲ್ ಸೈನ್ಯವು ಅಮಹಮದನಗರದ ಕೋಟೆಯನ್ನು ಸಂಪೂರ್ಣವಾಗಿ ತನ್ನ ಹಿಡಿತದಲ್ಲಿಟ್ಟುಕೊಂಡ ವಿಷಯ ತಿಳಿದು ಚಾಂದ್‌ಸುಲ್ತಾನಳ ಮೊಗಲ್‌ರಿಗೆ ಶರಣಾಗಿ ಅವರೊಂದಿಗೆ ಒಪ್ಪಂದ ಮಾಡಿಕೊಳ್ಳಲು ಯೋಚಿಸಿದಳು. ಆದರೆ ನೋಬೆಲ್ಸ್‌ನಿಂದ 'ಹಬ್ಬಿಯು' ಕೋಟೆಯನ್ನು ಬಲವಂತವಾಗಿ ನುಗ್ಗಿ ಅರಮನೆಯಲ್ಲಿಯೇ ಚಾಂದ್‌ಸುಲ್ತಾನಳನ್ನು ಕೊಲೆ ಮಾಡಿದ ಎಂದು ಹೇಳಿದ್ದಾರೆ.

'ಫೆರಿಸ್ತಾ ಮತ್ತು ತಜ್‌ಕಿರತುಲ್-ಮುಲ್ಕ' ಬರಹಗಾರರ ಪ್ರಕಾರ ಚಾಂದ್‌ಸುಲ್ತಾನಳ ಕೊಲೆಗಾರನ ಹೆಸರು ಹಬ್ಬಿಯಲ್ಲ ಜೀತಖಾನ ಎಂದು ಉಲ್ಲೇಖಗೊಂಡಿದೆ ಎಂದು ತಮ್ಮ ಅಭಿಪ್ರಾಯ ತಿಳಿಸಿದ್ದಾರೆ.

'ತಾರಿಖ್-ಐ-ಶಾಹಬಿ' ಇದು ಅಹಮದ್‌ನಗರದ ಇತಿಹಾಸದ ಕುರಿತು ಹೀಗೆ ಹೇಳುತ್ತದೆ. ಮೊಗಲ್‌ರು ಕೋಟೆಯನ್ನು ಪ್ರವೇಶಿಸಿದ್ದರಿಂದ ಅವಳನ್ನು ಬಂಧಿಸಲ್ಪಡಬಹುದೆಂದು ಕೋಟೆಯ ಕೊನಿಯಲ್ಲಿದ ಆ್ಯಸಿಡ್‌ನಲ್ಲಿ ಹಾರಿ ಪ್ರಾಣ ಕಳೆದುಕೊಂಡಳು ಎಂದು ತಿಳಿಸಿದ್ದಾರೆ.

'ಹಿಸ್ಟರಿ ಆಫ್ ಅಹಮದನಗರ'ದ ಇತಿಹಾಸಕಾರ ಸೈಯ್ಯದ್ ಜಾಫರ್‌ನು ಚಾಂದ್‌ಸುಲ್ತಾನಳು ಮತ್ತು ಅವಳ ಎಲ್ಲ ಸಹವರ್ತಿಗಳು 'ಮಲ್ಛಿಬಾಹೋಲಿ' ಎಂಬ ಬಾವಿಯಲ್ಲಿ ಹಾರಿ ಸತ್ತರು. ಹನಯಲ್‌ನು ಬಹದೂರ ನಿಜಾಮ್‌ಷಾಹನ ಕೋರಿಕೆಯಂತೆ ಮೃತ ದೇಹಗಳನ್ನು ಅದರಿಂದ ತೆಗೆದು ನೋಡಿದಾಗ ಚಾಂದ್‌ಬೀಬಿಯ ಮೃತ ದೇಹವು ಇತ್ತು. ಎಲ್ಲ ಶವಗಳನ್ನು 'ರೌಜಾಬಾಗ್' ಎಂಬಲ್ಲಿ ಅಂತ್ಯ ಸಂಸ್ಕಾರ ಮಾಡಲಾಯಿತು. ಅಹಮದನಗರದ ದಿನಾಂಕ ಹಿಜರ್‌ಸನ್ ೧ನೇ ಮೊಹರಂ(೧೦೦೯)ರಂದು ಒಂದು ದಿನ ಸಂಭವಿಸಿತು.

'ಜಮಿಲ್ ಉಲುಮ್' ನಂತೆ ಚಾಂದ್‌ಸುಲ್ತಾನಳ ಸೌಂದರ್ಯ ಸೂರ್ಯ ಚಂದ್ರರಂತೆ ಪ್ರಕಾಶಮಾನವಾಗಿತ್ತು. ಅವಳ ಗುಣ, ಧೈರ್ಯ, ನಡತೆಯಿಂದ ಮೊಗಲ್ ಸೈನ್ಯಕ್ಕೆ ಸಿಂಹಸ್ವಪ್ನಳಾಗಿದ್ದಳು. ಒಂದು ವೇಳೆ ಅವಳು ಜೀವಂತವಾಗಿ ಸೆರೆ ಸಿಕ್ಕಿದರೆ ತನ್ನ ರಾಜ್ಯವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಳು ಎಂದು ತಿಳಿಸಿದ್ದಾರೆ.

ಚಾಂದ್‌ಸುಲ್ತಾನಳ ವಿರುದ್ಧ ಆಂತರಿಕ ಕಲಹಗಳು ಪ್ರಾರಂಭವಾಗಿ ಅವಳ ವಿರೋಧಿ ಬಣದವರು ಅಕ್ಬರನಿಗೆ ದಕ್ಷಿಣದ ಮೇಲೆ ದಾಳಿ ಮಾಡಲು ಆಹ್ವಾನಿಸಿದರು. ಕೆಲವು ದಿನಗಳಲ್ಲಿಯೇ ಕೋಟೆಯು ಪತನಗೊಳ್ಳುವುದು ಎಂದು ಅರಿತು ಚಾಂದ್‌ಸುಲ್ತಾನಳು ಶರಣಾಗಲು ಇಚ್ಛಿಸಿ ಅವಳು ಬಹಾದುರ್ ಸುಲ್ತಾನನನ್ನೂ ಜುನ್ನೈರ್‌ನಲ್ಲಿ ಉಳಿದುಕೊಳ್ಳಲು ಹೇಳಿದ್ದಾಗಿ 'ಜೀತಾಖಾನ್'ನು ಎಲ್ಲ ಸೈನಿಕರನ್ನು ಚಾಂದ್‌ಸುಲ್ತಾನಳು ಮೊಗಲ್‌ರೊಂದಿಗೆ ಒಳಸಂಚು ಮಾಡುತ್ತಿದ್ದಾಳೆಂದು ಅಪಪ್ರಚಾರ ಮಾಡಿದ. ಇದನ್ನು ಸಹಿಸದೆ ಸೈನಿಕರು ಅರಮನೆಯನ್ನು ಪ್ರವೇಶಿಸಿ ಚಾಂದ್‌ಸುಲ್ತಾಗಳನ್ನು ೧೫೯೯ರಲ್ಲಿ ಕೊಂದುಹಾಕಿದರು.

ಚಾಂದ್‌ಸುಲ್ತಾನಳ ಹತ್ಯೆ ಒಂದು ದೊಡ್ಡ ದುರಂತ. ಅವಳು ಬದುಕಿದ್ದಿದ್ದರೆ ನಿಜಾಮಷಾಹಿ ವಂಶವನ್ನು ಹೇಗೋ ಕಷ್ಟದಿಂದ ಪಾರುಮಾಡುತ್ತಿದ್ದಳು. ಅವಳ ಸಾವು ಇತಿಹಾಸದಲ್ಲಿ ಅವಳ ಪಾತ್ರವನ್ನೇನೂ ಕಡಿಮೆ ಮಾಡುವುದಿಲ್ಲ. ಒಂದಲ್ಲ ಎರಡು ಸಾರಿ ಬೃಹತ್ ಮೊಗಲ್ ಸೇನೆಯನ್ನು ಅವಳು ಪರಾಭವಗೊಳಿಸಿದಳು. ಇಬ್ರಾಹಿಂ ಖಾನ್-ಎ-ಖಾನನಂತಹ ಪ್ರಸಿದ್ಧರೂ ಅವಳ ಪರಾಕ್ರಮದೆದುರಿಗೆ ಏನನ್ನೂ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಚಾಂದ್‌ಸುಲ್ತಾನಳು ಒಂದು ಬೃಹತ್ ಸಾಮ್ರಾಜ್ಯದೆದುರು ಸೆಡ್ಡುಹೊಡೆದು ನಿಂತ ಶ್ರೇಷ್ಠಳಾದ ರಾಣಿ ಎಂದು ಎಂದಿಗೂ ನೆನಪಿನಲ್ಲಿ ಉಳಿಯುತ್ತಾಳೆ.

**ಟಿಪ್ಪಣಿಗಳು**

೧. ಕ್ಯಾಪ್ಟನ್ ಸಿ.ಸಿ.ಕೌಲೇ, ಟೇಲ್ಸ್ ಆಫ್ ಅಹಮ್ಮದ್‌ನಗರ, ಅಹಮದನಗರ, ೧೯೧೪, ಪು.೬೧
೨. ಷೇಕ್‌ಅಲಿ ಬಿ., ಕರ್ನಾಟಕ ಚರಿತ್ರೆ, ಸಂಪುಟ-೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪುಟ.೧೮೨
೩. ಅದೇ, ಪುಟ.೧೮೨
೪. ರಿಚರ್ಡ್ಸ್‌ಜಾನ್ ಎಫ್, ದಿ ಮೊಗಲ್ ಎಂಪಾಯರ್, ಕೆಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ೧೯೯೭, ಪು.೩೨
೫. ಗ್ರೇಬಲ್ ಜೆ.ಡಿ.ಇ, ಹಿಸ್ಟರಿ ಆಫ್ ದಿ ಡೆಕ್ಕನ್, ವಾಲ್ಯೂಮ್ಸ್-೨, ಮಿಟಲ್ ಪಬ್ಲಿಕೇಷನ್, ನ್ಯೂದೆಹಲಿ, ೧೯೯೦, ಪುಟ.೨೦೨
೬. ಅದೇ, ಪುಟ.೨೦೩-೦೪
೭. ಮಜುಂದಾರ್ ಆರ್.ಸಿ, ಮೊಗಲ್ ಸಾಮ್ರಾಜ್ಯ, ಸಂಪುಟ-೨, ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೩, ಪುಟ.೨೦೧
೮. ಅದೇ, ಪುಟ.೨೦೧
೯. ಅದೇ, ಪುಟ.೨೦೧
೧೦. ಷೇಕ್‌ಅಲಿ ಬಿ, ಪೂರ್ವೋಕ್ತ, ಪುಟ.೧೦೩
೧೧. ಖಾದ್ರಿ ಎಸ್.ಎ, ಮೆಮೊಯಿರ್ಸ್ ಆಫ್ ಚಾಂದ್‌ಬೀಬಿ, ಉಸ್ಮಾನಿಯ ಯೂನಿವರ್‌ಸಿಟಿ, ಹೈದ್ರಾಬಾದ್, ೧೯೩೪, ಪುಟ.೬೦
೧೨. ಷೇಕ್‌ಅಲಿ ಬಿ, ಪೂರ್ವೋಕ್ತ, ಪುಟ.೧೦೩
೧೩. ಖಾದ್ರಿ ಎಸ್.ಎ, ಪೂರ್ವೋಕ್ತ, ಪುಟ.೬೬
೧೪. ಷೇಕ್‌ಅಲಿ ಬಿ, ಪೂರ್ವೋಕ್ತ, ಪುಟ.೧೦೪
೧೫. ಅದೇ, ಪುಟ.೧೦೪
೧೬. ಕ್ಯಾಪ್ಟನ್ ಸಿ.ಸಿ. ಕೌಲೇ, ಪೂರ್ವೋಕ್ತ, ಪುಟ.೨೦

* * *

# ಉಪಸಂಹಾರ

ಪ್ರಸ್ತುತ ನಿಬಂಧವು ಚಾಂದ್‌ಬೀಬಿಯ ಚಾರಿತ್ರಿಕ ಅಧ್ಯಯನ ಕುರಿತದ್ದಾಗಿದೆ. ಚಾಂದ್‌ಬೀಬಿಯ ಜೀವನ, ಪರಿಚಯ, ಪರಿಸರ, ಪ್ರಭಾವ ಹಾಗೂ ರಾಜ್ಯದ ರಕ್ಷಣೆಯ ಹೋರಾಟಗಳು, ಸುಲ್ತಾನನ ರಕ್ಷಣೆ, ಅವಳ ವಿರುದ್ಧ ನಡೆದ ಒಳಸಂಚು ಮತ್ತು ಮೊಗಲ್‌ರ ವಿರುದ್ಧ ನಡೆಸಿದ ಹೋರಾಟದ ಸಮಯದಲ್ಲಿ ಕೈಗೊಂಡಿರುವ ಕ್ರಮಗಳನ್ನು ಗುರುತಿಸಲಾಗಿದೆ.

'ರಾಜಕಾರಣ' ಎನ್ನುವ ಪದವನ್ನು ರಾಜರ ಹಿನ್ನೆಲೆಯಿಂದಷ್ಟೆ ನೋಡಲಾಗಿದೆ. ಆದರೆ ಅವಕಾಶ ಸಿಕ್ಕಾಗ ರಾಣಿಯರು ಕೂಡ ಅವರ ಸಂದರ್ಭದ ರಾಜಕಾರಣವನ್ನು ಸರಿಯಾಗಿ ನಿಭಾಯಿಸಿದಕ್ಕೆ ನಿದರ್ಶನಗಳಿವೆ. ಮಧ್ಯಕಾಲೀನ ಕರ್ನಾಟಕದ ಚರಿತ್ರೆಯ ಸಂದರ್ಭದಲ್ಲಿ ಚಾಂದ್‌ಬೀಬಿ ಇದಕ್ಕೆ ಉತ್ತಮ ಉದಾಹರಣೆಯಾಗಿದ್ದಾಳೆ. ಬಿಜಾಪುರ ಹಾಗೂ ಅಹಮದನಗರಗಳಲ್ಲಿ ರಾಜಕೀಯ ಬಿಕ್ಕಟ್ಟು ತಲೆದೋರಿದಾಗ ಅದನ್ನು ಸಮರ್ಥವಾಗಿ ಎದುರಿಸಿ ತನ್ನ ಸಾಮರ್ಥ್ಯವನ್ನು ಮೆರೆಯುತ್ತಾಳೆ. 'ಷಾಹಿ' ರಾಜ್ಯಗಳಲ್ಲಿ ರಾಜಕಾರಣ ಎಲ್ಲ ಮಹಿಳೆಯರಿಗೂ ಕಡ್ಡಾಯವಾಗಿರಲಿಲ್ಲ. ಅದು ಸ್ವ-ಇಚ್ಛೆ, ಪ್ರತಿಭೆ, ಶಕ್ತಿ, ಸಾಮರ್ಥ್ಯ, ಚಾಣಕ್ಷತೆ ಇದ್ದವರಿಗೆ ಮಾತ್ರ ಸಾಧ್ಯವಾಗುತ್ತಿತ್ತು. ಕೆಲವು ಸಂದರ್ಭ, ಸನ್ನಿವೇಶಗಳು ಕೂಡ ರಾಜಕಾರಣದಲ್ಲಿ ಭಾಗಿಯಾಗುವಂತೆ ಮಾಡುತ್ತಿದ್ದವು. ಅಂತಹ ಅವಕಾಶ ಚಾಂದ್‌ಬೀಬಿಗೆ ಒದಗಿ ಬಂತು. ಅವಳು ದೊರೆತಿರುವ ಅವಕಾಶಗಳನ್ನು ಬಳಸಿಕೊಂಡು ಬಿಜಾಪುರದ ಮತ್ತು ಅಹಮದನಗರ ರಾಜ್ಯಗಳ ಅಧಿಕಾರವನ್ನು ವಹಿಸಿಕೊಂಡು ಆಡಳಿತ ನಡೆಸಿದಳು.

ಚಾಂದ್‌ಬೀಬಿಯ ಆಳ್ವಿಕೆಯ ಸ್ವರೂಪವನ್ನು ತಿಳಿದುಕೊಳ್ಳಬೇಕಾದರೆ ಅವಳ ಪೂರ್ವದ ರಾಜಕೀಯ ಹಿನ್ನೆಲೆಯನ್ನು ತಿಳಿದುಕೊಳ್ಳಬೇಕಾದ ಜರೂರು ಇದೆ. ಅಂದರೆ ಬಹಮನಿ ಮತ್ತು ಆದಿಲ್‌ಷಾಹಿಗಳ ರಾಜಕೀಯ ಹಿನ್ನೆಲೆಯನ್ನು ಅರಿಯುವುದು ಅತ್ಯವಶ್ಯಕವಾಗುತ್ತದೆ. ಬಹಮನಿ ಸಾಮ್ರಾಜ್ಯವು ಕ್ರಿ.ಶ. ೧೩೪೭ರಲ್ಲಿ 'ಅಲ್ಲಾವುದ್ದೀನ್ ಹಸನ್ ಗಂಗೂ ಬಹಮನ್ ಷಾಹ'ನಿಂದ ಸ್ಥಾಪನೆಯಾಗಿತ್ತು. ಅವನು 'ಗುಲಬರ್ಗಾ'ವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಬಹಮನಿ ಸಾಮ್ರಾಜ್ಯದ ಸುಲ್ತಾನರು ಸುಮಾರು ಎರಡು ಶತಮಾನಗಳವರೆಗೆ ಸ್ವತಂತ್ರವಾಗಿ ಆಳ್ವಿಕೆ ನಡೆಸಿದರು. ಇವರ ಆಳ್ವಿಕೆಯನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಒಂದು 'ಗುಲಬರ್ಗಾ ಹಂತ', ಇನ್ನೊಂದು 'ಬೀದರ್ ಹಂತ', ಮೊದಲನೆಯ ಹಂತದಲ್ಲಿ ಅಂದರೆ ಗುಲಬರ್ಗಾದಲ್ಲಿ ಸುಮಾರು ಏಳು ಜನ ಸುಲ್ತಾನರು ಆಳ್ವಿಕೆ ನಡೆಸಿದ್ದಾರೆ. ಈ ಹಂತದ ಕೊನೆಯ ಸುಲ್ತಾನ ತಾಜುದ್ದೀನ್ ಫಿರೋಜ್ ಷಾಹನು ಆಗಿದ್ದನು. ಇವನ ಮರಣದ ನಂತರ ಶಹಾಬುದ್ದೀನ್ ಅಹಮದ

ಕ್ರಿ.ಶ. ೧೪೨೨ರಲ್ಲಿ ಬಹಮನಿ ಸುಲ್ತಾನನಾದನು. ಇವನು ಅಧಿಕಾರ ವಹಿಸಿಕೊಂಡು ತನ್ನ ರಾಜಧಾನಿಯನ್ನು ಗುಲಬರ್ಗಾದಿಂದ ಬೀದರ್‌ಗೆ ಕ್ರಿ.ಶ. ೧೪೨೮ರಲ್ಲಿ ವರ್ಗಾಯಿಸಿದನು. ರಾಜಧಾನಿ ವರ್ಗಾಯಿಸಲು ಕಾರಣವೆಂದರೆ, ಅಹಮದನ ಗುರುವಾಗಿದ್ದ 'ಸಂತ ಹಜರತ್ ಗೇಸೂದ ರಾಜ್' ಅವರ ಮರಣ ಹಾಗೂ ಗುಲಬರ್ಗಾದಲ್ಲಿ ಅಧಿಕಾರಕ್ಕಾಗಿ ನಡೆಯುತ್ತಿದ್ದ ಒಳಸಂಚು, ಬೀದರ್ ಹಂತದಲ್ಲಿ ಸುಮಾರು ಹತ್ತು ಜನ ಸುಲ್ತಾನರು ಆಳ್ವಿಕೆ ನಡೆಸಿದರು. ಮಹಮೂದ್ ಗವಾನನ ಮರಣದ ನಂತರ ಬಹಮನಿ ರಾಜ್ಯದ ಪತನದ ಹಾದಿ ಪ್ರಾರಂಭವಾಯಿತು.

ಮೂರನೆಯ ಮಹಮದ್ ಷಾಹನ ಆಳ್ವಿಕೆಯ ಸಂದರ್ಭದಲ್ಲಿ ಅಹಮದನಗರದ ಮಲಿಕ್ ಅಹಮದ್ ನಿಜಾಮ ಷಾಹನು ಕ್ರಿ.ಶ. ೧೪೯೦ರಲ್ಲಿ ಸ್ವತಂತ್ರ ಘೋಷಿಸಿಕೊಂಡನು. ಇವನ ನಂತರ ಬಿಜಾಪುರದ ಯೂಸಫ್ ಆದಿಲ್‌ಖಾನನು ಕ್ರಿ.ಶ. ೧೪೯೦ರಲ್ಲಿ ಸ್ವತಂತ್ರಗೊಂಡನು. ಹೀಗೆ ಒಂದೊಂದೇ ರಾಜ್ಯಗಳು ತಮ್ಮ ಸ್ವತಂತ್ರವನ್ನು ಘೋಷಿಸಿಕೊಂಡು ಆಡಳಿತ ನಡೆಸಲು ಪ್ರಾರಂಭಿಸಿದವು. ಬಹಮನಿ ಸಾಮ್ರಾಜ್ಯದ ಕೊನೆಯ ಸುಲ್ತಾನನಾದ ಕಲೀಮುಲ್ಲಾನ ಮರಣದ ನಂತರ ಬಹಮನಿ ರಾಜ್ಯ ಪತನ ಹೊಂದಿತು. ಇದು ಐದು ಷಾಹಿ ರಾಜ್ಯಗಳ ಉದಯಕ್ಕೆ ಕಾರಣವಾಯಿತು. ಅವುಗಳೆಂದರೆ ಅಹಮದನಗರ, ಬಿಜಾಪುರ, ಗೋಲ್ಕೊಂಡ, ಬೀರಾರ್ ಮತ್ತು ಬೀದರ್.

ಈ ಐದು ಷಾಹಿ ರಾಜ್ಯಗಳಲ್ಲಿ ಪ್ರಮುಖವಾಗಿದ್ದು ಕೇವಲ ಮೂರು ರಾಜ್ಯಗಳು ಮಾತ್ರ. ಅವುಗಳೆಂದರೆ ಬಿಜಾಪುರ, ಅಹಮದನಗರ ಮತ್ತು ಗೋಲ್ಕೊಂಡ. ಇವುಗಳು ರಾಜ್ಯದ ವಿಸ್ತರಣೆಗಾಗಿ ತಮ್ಮ ತಮ್ಮಲ್ಲಿ ನಿರಂತರವಾಗಿ ಯುದ್ಧದಲ್ಲಿ ತೊಡಗುತ್ತಿದ್ದವು. ಈ ರಾಜ್ಯದ ಸುಲ್ತಾನರು ತಮ್ಮ ನೆರೆಯ ರಾಜ್ಯವನ್ನು ಸೋಲಿಸುವುದಕೋಸ್ಕರ ವಿಜಯನಗರದ ಸಾಮ್ರಾಜ್ಯದ ಅರಸರ ಬೆಂಬಲ ಪಡೆಯುತ್ತಿದ್ದರು. ಬಿಜಾಪುರ ಮತ್ತು ಅಹಮದನಗರದ ರಾಜ್ಯಗಳ ಮಧ್ಯ ಶೋಲಾಪುರ ಪ್ರದೇಶಕ್ಕಾಗಿ ನಿರಂತರ ಯುದ್ಧಗಳು ನಡೆಯುತ್ತಿದ್ದವು. ಈ ಸಮಸ್ಯೆ ಸೃಷ್ಟಿಯಾಗಿದ್ದು ಇಸ್ಮಾಯಿಲ್ ಆದಿಲ್‌ಖಾನನ ಆಳ್ವಿಕೆಯಲ್ಲಿ ಇವನು ಅಹಮದನಗರದ ಸುಲ್ತಾನನಾದ ಬರ್ಹಾನ್‌ನೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದನು. ಇಸ್ಮಾಯಿಲ್‌ನು ಬರ್ಹಾನ್‌ನಿಗೆ ತನ್ನ ಸಹೋದರಿಯ ಜೊತೆಗೆ ಶೋಲಾಪುರ ಪ್ರದೇಶವನ್ನು ವರದಕ್ಷಿಣೆಯಾಗಿ ನೀಡುವುದಾಗಿ ಹೇಳಿದನು. ಆದರೆ ಮದುವೆಯ ನಂತರ ಆ ಪ್ರದೇಶವನ್ನು ನೀಡಲು ನಿರಾಕರಿಸಿದನು. ಇದರಿಂದ ಪ್ರಾರಂಭವಾದ ಯುದ್ಧಗಳು ಅಹಮದನಗರದ ಪತನದವರೆಗೆ ನಡೆಯುತ್ತಲೇ ಇದ್ದವು.

ವಿಜಯನಗರದ ಅರಸನಾದ ಅಳಿಯ ರಾಮರಾಯನ ವಿರುದ್ಧ ಸೇಡು ತೀರಿಸಿಕೊಳ್ಳುವುದಕ್ಕಾಗಿ ಬಿಜಾಪುರದೊಂದಿಗೆ ವೈವಾಹಿಕ ಸಂಬಂಧ ಬೆಳೆಸಲು ಅಹಮದನಗರದ ಒಂದನೇ ಹುಸೇನ್ ನಿಜಾಮ ಷಾಹನು ನಿರ್ಧರಿಸಿದನು. ಅದರಂತೆ ಕ್ರಿ.ಶ. ೧೫೬೪ರಲ್ಲಿ ಬಿಜಾಪುರದ ಅಲಿ ಆದಿಲ್‌ಷಾಹನಿಗೆ, ಒಂದನೆಯ ಹುಸೇನ್ ನಿಜಾಮ ಷಾಹನ ಮಗಳಾದ ಚಾಂದ್‌ಬೀಬಿಯೊಂದಿಗೆ ವಿವಾಹ ಮಾಡಲಾಯಿತು. ಜೊತೆಗೆ ಈ ರಾಜ್ಯಗಳ ಮಧ್ಯೆ, ಮುಖ್ಯವಾಗಿ ವಿವಾದ ಗ್ರಸ್ತವಾಗಿದ್ದ ಶೋಲಾಪುರವನ್ನು ವಿವಾಹದ ಸಂದರ್ಭದಲ್ಲಿ ವರನಿಗೆ ಬಳುವಳಿಯಾಗಿ ಕೊಡಲಾಯಿತು. ಇನ್ನೊಂದು ಕಡೆಗೆ ಅಲಿಯ ಸಹೋದರಿಯಾಗಿದ್ದ ಹದಿಯಾ ಸುಲ್ತಾನಾಳನ್ನು ಹುಸೇನ್‌ನ ಉತ್ತರಾಧಿಕಾರಿಯಾಗಿದ್ದ ಮುರ್ತಜಾನಿಗೆ ಕೊಟ್ಟು ವಿವಾಹ ನಡೆಸಲಾಯಿತು. ಹೀಗೆ ಎರಡು ರಾಜ್ಯಗಳ ಮಧ್ಯ ಅವಳಿ ವಿವಾಹದಿಂದ ಸ್ವಲ್ಪ ಸಮಯದವರೆಗೆ ಯುದ್ಧಗಳು ಸ್ಥಗಿತಗೊಂಡವು.

ಬಿಜಾಪುರದ ಆದಿಲ್‌ಷಾಹಿ ಸುಲ್ತಾನರುಗಳಲ್ಲಿ ಚಾಂದ್‌ಬೀಬಿಯು ಪ್ರಮುಖಳಾಗಿ ಕಂಡು ಬರುತ್ತಾಳೆ. ಅವಳ ಸಾಧನೆಗಳು ಬಿಜಾಪುರದ ಜನತೆ ಮರೆಯುವಂತಿರಲಿಲ್ಲ. ಚಾಂದ್‌ಬೀಬಿಯು ವಿವಾಹದ ನಂತರ ತನ್ನ ಗಂಡನ ಜೊತೆಗೆ ಆಡಳಿತ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದಳು. ಮತ್ತು ಅಲಿ ಆದಿಲ್‌ಷಾಹನು ವೈರಿಗಳ ಜೊತೆಗೆ ಯುದ್ಧದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಚಾಂದ್‌ಬೀಬಿಯು ತಮ್ಮ ರಾಜಧಾನಿಯಲ್ಲಿ ಸುಲ್ತಾನನ ಪರವಾಗಿ ಆಡಳಿತವನ್ನು ಸುವ್ಯವಸ್ಥೆಯಿಂದ ನಡೆಸಿಕೊಂಡು ಹೋಗುತ್ತಿದ್ದಳು. ಆದರೆ ಅಂದಿನ ಸಂದರ್ಭದಲ್ಲಿ ಒಬ್ಬ ಸ್ತ್ರೀಯು ಆಡಳಿತ ನಡೆಸಿಕೊಂಡು ಹೋಗುವುದು ಸುಲಭದ ಕೆಲಸವಾಗಿರಲಿಲ್ಲ. ಆದರೆ ಚಾಂದ್‌ಬೀಬಿಯು ಅಂದಿನ ಸಂದರ್ಭದಲ್ಲಿ ಚಾಣಾಕ್ಷತನ ಮತ್ತು ಸಾಹಸದಿಂದ ಎಲ್ಲ ಅಧಿಕಾರಗಳನ್ನು ಒಗ್ಗೂಡಿಸಿ ಆಡಳಿತ ನಡೆಸಿಕೊಂಡು ಹೋಗುವಲ್ಲಿ ಯಶಸ್ವಿಯಾದಳು. ಹೆಣ್ಣಿಗೆ ಅಧಿಕಾರ ನೀಡುವುದನ್ನು ಒಪ್ಪದ ಅಂದಿನ ಸಂಪ್ರದಾಯವಾದಿ ಜನವರ್ಗದ ಮಧ್ಯೆ ಆಡಳಿತ ನಡೆಸಿಕೊಂಡು ಹೋಗಿರುವುದು ಚಾಂದ್‌ಬೀಬಿಯ ದಿಟ್ಟತನವನ್ನು ತೋರಿಸುತ್ತದೆ.

ಅಲಿ ಆದಿಲ್‌ಷಾಹನ ಮರಣದ ನಂತರ, ಮಕ್ಕಳಿಲ್ಲದ ಕಾರಣ ತೆರವಾದ ಸಿಂಹಾಸನದ ಮೇಲೆ ಅವನ ಸಹೋದರನ ಮಗನಾದ ಎರಡನೇ ಇಬ್ರಾಹಿಂ ಆದಿಲ್‌ಷಾಹನನ್ನು ಪಟ್ಟಕ್ಕೆ ತರಲಾಯಿತು. ಆಗ ಅವನು ೯ ವರುಷದ ಬಾಲಕನಾಗಿದ್ದನು.ಮುಂದಿನ ಹತ್ತು ವರ್ಷಗಳ ಕಾಲ ಬಿಜಾಪುರ ರಾಜ್ಯದಲ್ಲಿ ಪ್ರತಿನಿಧಿಗಳ ಆಳ್ವಿಕೆ ಪ್ರಾರಂಭವಾಯಿತು. ಸುಲ್ತಾನನ ಸುರಕ್ಷತೆ ಹಾಗೂ ಆತನ ಅಭ್ಯಾಸ ಇತ್ಯಾದಿಗಳ ಜವಾಬ್ದಾರಿಯು ದೊಡ್ಡಮ್ಮ, ವಿಧವೆ ರಾಣಿ ಚಾಂದ್‌ಬೀಬಿಯದ್ದಾಗಿತ್ತು. ಇವಳು ಬಿಜಾಪುರ ರಾಜ್ಯದ ಎಲ್ಲ ಅಧಿಕಾರಗಳನ್ನು ತನ್ನ ಹತೋಟಿಗೆ ತೆಗೆದುಕೊಂಡು ಆಡಳಿತ ನಡೆಸತೊಡಗಿದಳು. ರಾಜ್ಯದ ಎಲ್ಲ ವ್ಯವಹಾರಗಳನ್ನು ನೋಡಿಕೊಳ್ಳುವುದು ಮತ್ತು ಸುಲ್ತಾನನ ಪಾಲನೆ ಮಾಡುವುದು ಕಷ್ಟಕರವಾಗುತ್ತಿತ್ತು. ಅದಕ್ಕಾಗಿ ತನ್ನ ಸಹಾಯಕ್ಕಾಗಿ ಇನ್ನೊಬ್ಬ ರೀಜೆಂಟನನ್ನು ನೇಮಕ ಮಾಡಿದಳು. ಅದು ಅವಳು ಮಾಡಿದ ದೊಡ್ಡ ತಪ್ಪು. ಏಕೆಂದರೆ ಈ ರೀಜೆಂಟರು ಅಧಿಕಾರದ ಆಸೆಯಿಂದ ಚಾಂದ್‌ಬೀಬಿಯ ವಿರುದ್ಧ ಒಳಸಂಚು ನಡೆಸುತ್ತಿದ್ದರು. ಹಾಗೂ ಅಧಿಕಾರಿಗಳಿಗೆ ಒಬ್ಬ ಸ್ತ್ರೀಯ ಜೊತೆಗೆ ಆಡಳಿತ ನಡೆಸಿಕೊಂಡು ಹೋಗಲು ಇಷ್ಟವಿರಲಿಲ್ಲ. ಆದರೆ ಪ್ರಗತಿಪರ ಮಂತ್ರಿವರ್ಗದವರು ರಾಜ್ಯದ ಹಿತದೃಷ್ಟಿಯಿಂದ ಚಾಂದ್‌ಬೀಬಿಯ ಆಡಳಿತವನ್ನು ಮನ್ನಿಸಿ ಅವಳಿಗೆ ಬೆಂಬಲ ನೀಡಿದರು. ಇವರ ಬೆಂಬಲದಿಂದ ತನ್ನ ವಿರುದ್ಧ ನಡೆಯುತ್ತಿದ್ದ ಒಳಪಿತೂರಿಗಳನ್ನು ಸದೆಬಡೆಯುವಲ್ಲಿ ಯಶಸ್ವಿಯಾದಳು. ಆದರೆ ಸಂಪೂರ್ಣವಾಗಿ ತನ್ನ ವಿರೋದಿಗಳನ್ನು ಮಟ್ಟ ಹಾಕುವಲ್ಲಿ ಯಶಸ್ವಿಯಾಗಿರಲಿಲ್ಲ. ಅದರ ಫಲವೇ ಮುಂದಿನ ದಿನಗಳಲ್ಲಿ ಅವಳು ಸೆರೆವಾಸದಲ್ಲಿ ಕಾಲ ಕಳೆಯಬೇಕಾಯಿತು. ಅದಕ್ಕೆ ಕಾರಣವೆಂದರೆ ಕಿಶ್ವರಖಾನ, ಏಕೆಂದರೆ ಚಾಂದ್‌ಬೀಬಿಯು ಅವನನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಬಯಸಿದ್ದಳು. ಗುಲಾಮನಂತೆ ಕೆಲಸ ಮಾಡಲು ಇಚ್ಛಿಸದೇ ಅವಳ ವಿರುದ್ಧ ಒಳಪಿತೂರಿ ನಡೆಸಲಾರಂಭಿಸಿದನು. ಅವನ ಪಿತೂರಿಗೆ ಒಳಗಾಗಿ ಚಾಂದ್‌ಬೀಬಿ ಸೆರೆಮನೆವಾಸ ಅನುಭವಿಸಬೇಕಾಯಿತು. ಕಿಶ್ವರಖಾನನ ಈ ಕೃತ್ಯದಿಂದ ಬಿಜಾಪುರದ ಜನರು ಛೀಮಾರಿಹಾಕಿದರು ಮತ್ತು ಎಲ್ಲಾ ಅಧಿಕಾರಿಗಳು ಸೇರಿ ಅವನ ವಿರುದ್ಧ ಬಂಡೆದ್ದರು. ಇಡೀ ಬಿಜಾಪುರವೇ ದಂಗೆ ಎದ್ದಿತು. ಬಹುಬೇಗನೆ ಕಿಶ್ವರಖಾನನ ರೀಜೆಂಟನ ಅಧಿಕಾರ ಅವಧಿ ಕೊನೆಗೊಂಡಿತು.

ಚಾಂದ್‌ಬೀಬಿಯು ರೀಜೆಂಟರುಗಳಿಗೆ ಹೆಚ್ಚಿನ ಅಧಿಕಾರ ನೀಡಿದ್ದರಿಂದ ಅವರು ಅವಳನ್ನು ಅಧಿಕಾರದಿಂದ ವಜಾಗೊಳಿಸಲು ಪ್ರಯತ್ನಿಸಿದರು. ಇದರಿಂದ ಚಾಂದ್‌ಬೀಬಿಯು ಪಾಠ ಕಲಿತು ರೀಜೆಂಟರುಗಳ ಅಧಿಕಾರವನ್ನು ಕಡಿತಗೊಳಿಸಿ ಮುಂದಿನ ಆಡಳಿತವನ್ನು ನಡೆಸಿಕೊಂಡು ಹೋಗಲಾರಂಭಿಸಿದಳು. ಆದರೆ ಬಿಜಾಪುರದಲ್ಲಿ ಬಹಳ ಕಲಹಗಳು ಪ್ರಾರಂಭವಾದವು. ಅವುಗಳನ್ನು ಸದೆಬಡೆಯಲು ಸಾಧ್ಯವಾಗದ ಸಂದರ್ಭದಲ್ಲಿ ಅವಳು ಅಹಮದನಗರಕ್ಕೆ ಹೋಗಲು ಯೋಜನೆ ಹಾಕತೊಡಗಿದಳು. ಅದೇ ಸಂದರ್ಭದಲ್ಲಿ ಅವಳ ರೀಜೆಂಟನಾದ ದಿಲಾವರಖಾನ ಷಾಹಿ ರಾಜ್ಯಗಳ ಗಡಿಸಮಸ್ಯೆಯಿಂದಾಗುತ್ತಿದ್ದ ಯುದ್ಧಗಳನ್ನು ತಡೆಗಟ್ಟಲು ಷಾಹಿ ರಾಜ್ಯಗಳ ಮಧ್ಯ ವೈವಾಹಿಕ ಸಂಬಂಧ ಬೆಳೆಸಲು ಮುಂದಾದನು. ಅಹಮದನಗರ ಮತ್ತು ಗೋಲ್ಕೊಂಡದ ರಾಜ್ಯಗಳೊಂದಿಗೆ ಮೈತ್ರಿಯ ಕುರಿತು ಚರ್ಚಿಸಲಾಯಿತು. ಅವರು ಕೂಡ ಈ ಸಂಬಂಧಕ್ಕೆ ಒಪ್ಪಿಗೆ ನೀಡಿದರು. ಅದರಂತೆ ಎರಡನೇ ಇಬ್ರಾಹಿಂ ಆದಿಲ್‌ಷಾಹನ ಸಹೋದರಿಯಾದ ಖದೀಜಾ ಸುಲ್ತಾನಳ ಜೊತೆಗೆ ಮುರ್ತುಜಾ ಹುಸೇನ್ ನಿಜಾಮಷಾಹನ ಮಗ ಮಿರ್ಜೈನ್ ಹುಸೇನ್‌ನೊಂದಿಗೆ ವಿವಾಹವಾಗುವುದು ಹಾಗೂ ಇಬ್ರಾಹಿಂ ಆದಿಲ್‌ಷಾಹನ ಜೊತೆಗೆ ಗೋಲ್ಕೊಂಡದ ಕುಲೀ ಕುತುಬ್ ಷಾಹನ ಮಗಳು ಚಾಂದ್‌ಬೀಬಿ ಸುಲ್ತಾನಗಳನ್ನು ಮದುವೆಯಾಗುವುದು ನಿರ್ಧಾರವಾಯಿತು. ಮದುವೆಯ ಕಾರ್ಯಕ್ರಮಗಳು ಮುಗಿದ ನಂತರ ಖದೀಜಾ ಸುಲ್ತಾನಳು ಅಹಮದನಗರಕ್ಕೆ ಹೋಗುವ ಸಮಯದಲ್ಲಿ ಚಾಂದ್‌ಬೀಬಿಗೂ ಅವಳ ಜೊತೆಗೆ ಹೋಗುವ ಅವಕಾಶ ದೊರೆಯಿತು. ಹೀಗೆ ಅವಳು ಬಿಜಾಪುರದಿಂದ ಅಹಮದನಗರಕ್ಕೆ ತೆರಳಿದಳು. ಅಷ್ಟೊತ್ತಿಗಾಗಲೇ ಎರಡನೇ ಇಬ್ರಾಹಿಂ ಆದಿಲ್‌ಷಾಹನು ಬಿಜಾಪುರದಲ್ಲಿನ ಆಡಳಿತ ನಡೆಸಲು ಸಮರ್ಥನಾಗಿದ್ದನು.

ಚಾಂದ್‌ಬೀಬಿಯು ಬಿಜಾಪುರದಲ್ಲಿ ರೀಜೆಂಟರುಗಳ ಮಧ್ಯ ನಡೆಯುತ್ತಿದ್ದ ದಂಗೆಗಳಿಂದ ಬೇಸತ್ತು ಅಹಮದನಗರಕ್ಕೆ ಹೋಗಬೇಕಾಯಿತು. ಆದರೆ ಅಹಮದನಗರಲ್ಲಿಯೂ ಕೂಡ ಸಿಂಹಾಸನಕ್ಕಾಗಿ ಕಲಹಗಳು ಪ್ರಾರಂಭವಾಗಿದ್ದವು. ಅಲ್ಲಿಯೂ ಕೂಡಾ ಹಿಂಸಾತ್ಮಾಕ ಘಟನೆಗಳನ್ನು ನೋಡಬೇಕಾಯಿತು. ಅಹಮದನಗರದ ಆತಂರಿಕ ಕಲಹಗಳಿಂದ ಅದರ ಪರಿಣಾಮವು ಆಡಳಿತದ ಮೇಲೆ ಬೀಳುವಂತಾಯಿತು. ಇದರಿಂದ ಪ್ರಗತಿಪರ ಮಂತ್ರಿವರ್ಗವು ಚಾಂದ್‌ಬೀಬಿಗೆ ರಾಜ್ಯದ ರಾಜಕೀಯದಲ್ಲಿ ಪ್ರವೇಶ ಮಾಡಲು ಸಲಹೆ ನೀಡಿದರು. ಒಂದು ವೇಳೆ ನೀವು ತಟಸ್ಥನೀತಿ ಹೊಂದಿದರೆ ಅಹಮದನಗರ ರಾಜ್ಯವು ನಾಶ ಹೊಂದುವುದರಲ್ಲಿ ಯಾವುದೇ ಸಂಶಯವಿಲ್ಲ ಎಂದು ತಿಳಿಸಿದರು. ಅದೇ ಸಮಯದಲ್ಲಿ ಇಬ್ರಾಹಿಂ ನಿಜಾಮಷಾಹನು ಮರಣ ಹೊಂದಿದನು. ಅವನ ಮಗ ಬಹಾದುರನನ್ನು ಪಟ್ಟಕ್ಕೆ ತರಲಾಯಿತು. ಅವನು ಇನ್ನೂ ಬಾಲಕನಾಗಿದ್ದ ಕಾರಣ ಚಾಂದ್‌ಬೀಬಿಯು ಸುಲ್ತಾನನ ಪ್ರತಿನಿಧಿಯಾಗಿ ಅಧಿಕಾರ ವಹಿಸಿಕೊಂಡಳು. ಅಹಮದನಗರದ ಮಂತ್ರಿಗಳಾದ ಇಕ್ಲಾಸ್‌ಖಾನನು, ಆಭಂಗ್‌ಖಾನ ಮತ್ತು ಮಿಯಾನ್ ಮಂಜ್ಜುವು ಇವಳ ಅಧಿಕಾರವನ್ನು ಒಪ್ಪಲಿಲ್ಲ. ಅವರು ಒಬ್ಬ ಸಾಮಾನ್ಯ ಸ್ತ್ರೀಯ ಕೈಕೆಳಗೆ ಮಂತ್ರಿಯಾಗಿ ಕೆಲಸ ಮಾಡಲು ಇಚ್ಛೆಸಲಿಲ್ಲ. ಅಲ್ಲದೇ ಅವಳನ್ನು ಅಧಿಕಾರದಿಂದ ವಜಾಗೊಳಿಸಲು ಮಿಯಾನ್ ಮಂಜ್ಜುವು ಮೊಗಲ್‌ರ ಸೈನಿಕ ಸಹಾಯ ಕೋರಿದನು.

ಮೊಗಲ್ ಸಾಮ್ರಾಜ್ಯದ ಶ್ರೇಷ್ಠ ಸುಲ್ತಾನನಾದ ಅಕ್ಬರನು ಉತ್ತರ ಭಾರತದ ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತಲೇ ದಕ್ಷಿಣದ ಮೇಲೂ ದಾಳಿ ಮಾಡಲು ಯೋಜನೆ ರೂಪಿಸುತ್ತಿದ್ದನು. ಅದೇ ಸಮಯದಲ್ಲಿ

ಅಹಮದನಗರದಿಂದ ಮಿಯಾನ್ ಮಂಜ್ಜುವಿನ ಸಂದೇಶ ದೊರೆಯಿತು. ಇದರಿಂದ ತನ್ನ ಮಗನಾದ ಮುರಾದನನ್ನು ದಖಿನ್‌ನಿನ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಬಲಿಷ್ಠವಾದ ಸೈನ್ಯದೊಂದಿಗೆ ಕಳುಹಿಸಿದನು. ಆದರೆ ಮಿಯಾನ್ ಮಂಜ್ಜುವಿಗೆ ತಾನು ಮಾಡಿದ ತಪ್ಪಿನ ಅರಿವು ಮೂಡಿತು. ಆದರೆ ಅಷ್ಟರೊಳಗೆ ಅವನು ಚಾಂದ್‌ಬೀಬಿಗೆ ವಿಷಯ ತಿಳಿಸಿದ್ದನು. ಆಗ ಚಾಂದ್‌ಬೀಬಿಯು ಮಂತ್ರಿವರ್ಗದ ಜೊತೆಗೆ ಚರ್ಚಿಸಿ ಮೊಗಲ್‌ರಿಗೆ ತಮ್ಮ ರಾಜ್ಯ ಬಿಟ್ಟು ಕೊಡಬಾರದು, ಅವರೊಂದಿಗೆ ಹೋರಾಡಬೇಕು ಎಂಬುದಾಗಿ ನಿರ್ಧರಿಸಿದಳು. ಹಾಗೆ ಬಿಜಾಪುರ ಮತ್ತು ಅಹಮದನಗರ ರಾಜ್ಯಗಳಿಂದ ಸೈನಿಕ ಬೆಂಬಲ ಪಡೆಯುವ ಸಲುವಾಗಿ ರಾಜ್ಯಗಳಿಗೆ ರಾಯಬಾರಿಗಳನ್ನು ಕಳುಹಿಸಿದಳು. ಚಾಂದ್‌ಬೀಬಿಯ ಕೋರಿಕೆಯ ಮೇರೆಗೆ ಎರಡು ರಾಜ್ಯಗಳು ಸೈನಿಕ ಬೆಂಬಲ ನೀಡಲು ಒಪ್ಪಿಕೊಂಡವು. ಅಹಮದನಗರಕ್ಕೆ ಬಿಜಾಪುರ ಮತ್ತು ಗೋಲ್ಕೊಂಡ ರಾಜ್ಯಗಳು ನೆರವು ನೀಡುವ ವಿಷಯ ಅರಿತು ಅವರ ಸೈನ್ಯವು ಬರುವ ಪೂರ್ವದಲ್ಲಿಯೇ ದಾಳಿ ಮಾಡಿ ಅಹಮದನಗರವನ್ನು ವಶಪಡಿಸಿಕೊಳ್ಳಲು ಮೊಗಲ್ ಸೈನ್ಯ ಪ್ರಯತ್ನಿಸಿತು. ಆದರೆ ಯಶಸ್ವಿಯಾಗಲಿಲ್ಲ ಏಕೆಂದರೆ ಚಾಂದ್‌ಬೀಬಿಯ ಸಾಹಸಮಯ ಹೋರಾಟದಿಂದ ಮೊಗಲ್ ಸೈನ್ಯವು ಸೋಲಬೇಕಾಯಿತು. ಇದರಿಂದ ಮುರಾದನು ಚಾಂದ್‌ಬೀಬಿಯೊಂದಿಗೆ ಒಪ್ಪಂದ ಮಾಡಿಕೊಂಡು ಯುದ್ಧವನ್ನು ಅಂತ್ಯಗೊಳಿಸಿದ.

ಮೊಗಲ್ ಸೈನ್ಯದ ನಾಯಕತ್ವ ವಹಿಸಿದ ಮುರಾದ್‌ನು ತನ್ನ ಸೋಲನ್ನು ಮನಸಾರೆ ಒಪ್ಪಿಕೊಂಡು ಚಾಂದ್‌ಬೀಬಿಗೆ 'ಚಾಂದ್ ಸುಲ್ತಾನಾ' ಎಂಬ ಬಿರುದನ್ನು ನೀಡಿದನು. ಇದರಿಂದ ಚಾಂದ್‌ಬೀಬಿಯು ಇತಿಹಾಸದಲ್ಲಿ 'ಚಾಂದ್ ಸುಲ್ತಾನಾ' ಎಂದು ಪ್ರಸಿದ್ಧಿಯಾದಳು. ಬಿಜಾಪುರ ಮತ್ತು ಅಹಮದನಗರದ ಯಾವ ಸುಲ್ತಾನರೂ ಮಾಡದಿರುವ ಸಾಧನೆಯನ್ನು ಚಾಂದ್‌ಬೀಬಿ ಮಾಡಿದಳು. ಮೊಗಲ್ ಸೈನ್ಯವು ಸೋಲು ಅನುಭವಿಸಿದ ನಂತರ ಅಕ್ಬರನು ತನ್ನ ಇನ್ನೊಬ್ಬ ಮಗನಾದ 'ದಾನಿಯಲ'ನನ್ನು ಸೈನ್ಯಯೊಂದಿಗೆ ದಖಿನ್‌ಗೆ ಕಳುಹಿಸಿದನು. ಮತ್ತೆ ಚಾಂದ್‌ಬೀಬಿಯು ಗೋಲ್ಕೊಂಡ ಮತ್ತು ಬಿಜಾಪುರದ ರಾಜ್ಯಗಳ ಸೈನಿಕ ಬೆಂಬಲ ಕೋರಿದಳು. ಆದರೆ ಈ ಎರಡು ರಾಜ್ಯದ ಸುಲ್ತಾನರು ಅವಳಿಗೆ ಸೈನಿಕ ಬೆಂಬಲ ನೀಡದೆ ತಟಸ್ಥ ನೀತಿ ಅನುಸರಿಸಿದರು. ಇದರಿಂದಾಗಿ ಅಹಮದನಗರದಲ್ಲಿ ಮತ್ತೆ ಆಂತರಿಕ ಕಲಹಗಳು ಆರಂಭಗೊಂಡವು. ಮೊಗಲ್‌ರೊಂದಿಗೆ ಯುದ್ಧ ಮಾಡಿದರೆ ಸೋಲು ಅನುಭವಿಸಬೇಕಾಗುತ್ತದೆ. ಮತ್ತು ಹಾನಿಯಾಗುವುದು ಖಚಿತ ಎಂದು ಭಾವಿಸಿದ ಚಾಂದ್‌ಬೀಬಿ ಅವರೊಂದಿಗೆ ಚಾಣಕ್ಷತನದಿಂದ ಒಪ್ಪಂದ ಮಾಡಿಕೊಳ್ಳಲು ಆಲೋಚಿಸಿದಳು. ಆದರೆ ಅವಳ ದಂಡನಾಯಕನಾದ 'ಜೀತಖಾನ' ಸುಲ್ತಾನಳ ಯೋಜನೆಯನ್ನು ತಪ್ಪಾಗಿ ಗ್ರಹಿಸಿ, ಚಾಂದ್‌ಬೀಬಿಯು ಅಹಮದನಗರದ ಕೋಟೆ ಮೊಗಲ್‌ರಿಗೆ ಒಪ್ಪಿಸಿ ಸ್ವತಂತ್ರವಾಗಿ ಇರಲು ಇಚ್ಛಿಸಿದ್ದಾಳೆ ಎಂದು ಭಾವಿಸಿ ಕ್ರಿ.ಶ.೧೬೦೦ರಲ್ಲಿ ಚಾಂದ್‌ಬೀಬಿಯನ್ನು ಕೊಲೆ ಮಾಡಿದನು. ಅವಳ ಕೊಲೆಯು ಅಹಮದನಗರ ರಾಜ್ಯದ ಪತನಕ್ಕೆ ನಾಂದಿ ಆಯಿತು.

ಚಾಂದ್‌ಬೀಬಿಯು ಒಂದು ವೇಳೆ ಬದುಕಿದ್ದರೆ ಅಕ್ಬರನು ಎಂದಿಗೂ ಅಹಮದನಗರ ರಾಜ್ಯವನ್ನು ವಶಪಡಿಸಿಕೊಳ್ಳುತ್ತಿರಲಿಲ್ಲ. ಮೊಗಲ್ ಸಾಮ್ರಾಜ್ಯದ ಸೈನ್ಯವನ್ನು ಎರಡು ಬಾರಿ ಸೋಲಿಸಿ ಉತ್ತರಭಾರತದ ರಾಜ್ಯಗಳ ಯಾವ ಅರಸರೂ ಮಾಡದಿರುವ ಸಾಧನೆಯನ್ನು ಚಾಂದ್‌ಬೀಬಿಯು ಮಾಡಿದಳು. ಆದರೆ ಕೊನೆಯ ಸಮಯದಲ್ಲಿ ಅಂದರೆ ದಾನಿಯಲ ದಾಳಿ ಮಾಡಿದ್ದು ಬಿಜಾಪುರ ಮತ್ತು ಗೋಲ್ಕೊಂಡದ ರಾಜ್ಯಗಳಿಂದ ಬೆಂಬಲ

ದೊರಕದಿದ್ದಾಗ ದಾನಿಯಲನ ಜೊತೆಗೆ ಒಪ್ಪಂದ ಮಾಡಿಕೊಳ್ಳಲು ಮುಂದಾಗಿದ್ದು, ರಾಜಕಾರಣದ ಒಂದು ನೀತಿಯೇ ಆಗಿದೆ. ಆದರೆ ರಾಜ್ಯದೊಳಗಿನ ಹಿತ ಶತ್ರುಗಳು ಅದನ್ನು ಅರ್ಥೈಸಿಕೊಂಡ ಬಗೆಯೇ ಬೇರೆ. ಅದು ಚಾಂದ್‌ಬೀಬಿಯ ಕೊಲೆಯಲ್ಲಿ ಪರ್ಯಾವಸಾನಗೊಂಡಿತು. ದಕ್ಷಿಣ ಭಾರತದ ರಾಜಕಾರಣದಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿದ ಚಾಂದ್‌ಬೀಬಿಯ ಹೆಸರು ಚರಿತ್ರೆಯಲ್ಲಿ ಶಾಶ್ವತ ಸ್ಥಾನವನ್ನು ಪಡೆದುಕೊಂಡಿದೆ.

* * *

# ೧. ಪರಾಮರ್ಶನ ಗ್ರಂಥಗಳು

ಇಂಗ್ಲಿಷ್ ಕೃತಿಗಳು

1. Abdul Ganiimaratwale, '**History of Bijapur Subah** (1686-1885), Islamic Wanderi Bureav, Darya ganj, New Delhi, 2007
2. Annigere A.M., '**The Glory of Bijapur**', Bhavani Prakashana, Dharwad, 1981
3. Asiya Begum, '**Society and Culture under the Bijapur Sultan's**', (unpublished Ph.D Thesis), University of Mysore,1983
4. Basavaraj K.R., '**History and Culture of Karnataka**', Printers S.I.Akalwadi Monohar Priting, Press, Dharwad,1984
5. Captain C.C.Cowley, '**Tales of Ahmednagar**', Ahmednagar,1918
6. Chitnis K.N., '**Medieval Indian History**', Attantic Publishers and Distributors, Darya Ganj, New Delhi, 1990
7. Gribble J.D.E., '**History of The Deccan-I and IInd Volumes**', Mittal Pudlications, New Delhi, 1991
8. Habib Irfan, '**Medieval India I**', Oxford University Press, 2000
9. Habib Irfan, '**Akber and his India**, Oxford University Press, 2000
10. John Briggs M.R.A.S., '**History of the Rise of the Mahomedan power in India,** Volume I,II,III and IVth., Oriental Books Reprint Corporation, New Delhi,1981
11. John F. Richards, '**The Mughal Empire**', Camridge Press, 1997
12. Kaujalgi H.S., '**A Visit to Bijapur**', Kaujalgi.M.H. Samyukta Karnataka Press, 1957
13. Meadows Toylor, '**A Noble Queen: A Romance of Indian History**', Asian Education Services New Delhi, 1986
14. Muzaffar Alamand and Sanjay Subrahmanyam, '**The Mughal State** (1526-1750), Oxford University Press, 2000
15. Nayeem M.A., '**External Relations of the Bijapur Kingdom (1489 to 1686 AD)**', Bright Publishers, Hyderabad, 1974

16. Nayeem M.A., '**The Heritage of the Adil Shahis of Bijapur**', Publishers and Distributions peti Boudi, Jami Masjid Road, Bijapur, 2008

17. Padmaraj H., '**The Glory that is Bijapur**', P.S.Hambali, New Gadag Printers, Gadag, 1957

18. Satish Chandra, '**Medieval India Form Sultanate to the Mughals, Mughal Empire, (1526-1748)**', Har Anand Publications, New Delhi, 2005

19. Satish Chandra, "**History of Medieval India, (800 to 1700)**, Published by Orient Longman Private Limited, New Delhi-2007

20. Satyan B.N.(Ed), '**Bijapur District Gazetter**', Bangalore-1966

21. Sherwani H.K and Joshi P.M., '**History of Medieval Deccan, Volume, I[st] and II[nd]**, Government of Andhra Predesh, Hyderabad, 1973

22. Sherwani H.K and Joshi P.M (Editors), '**History of Medieval Deccan (1294-1724), Volume-I**', Published under the Authourity of the Government' of Andhra Pradesh-1973

23. Sinha S.K., '**Medieval History of the Deccan Volume-I**', Published by The Government of Andhra Pradesh, Hyderabad, 1964

24. Verma D.C., '**History of Bijapur**', Kumar Brothers, New Delhi, 1978

25. William Dalrymple, '**White Mughal's**', Typeset in Garamond by Mantra Virtual services New Delhi, 2002

26. Yazdani, '**Early History of the Medieval Deccan**, Volume I and IInd, Oxford University Press, 1960

27. Zinat Kausar, '**Mulim Woman in Medieval India**, Patna, 1992

**ಕನ್ನಡ ಕೃತಿಗಳು**

೧. ಕೃಷ್ಣಕೊಲ್ಹಾರ ಕುಲಕರ್ಣಿ., ಎರಡನೇಯ ಇಬ್ರಾಹಿಮ ಆದಿಲ್‌ಶಹನ ಕಿತಾಬೆ-ನೌರಸ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬

೨. ಕೃಷ್ಣ ಕೊಲ್ಹಾರ ಕುಲಕರ್ಣಿ, 'ಬುಸಾತಿನೆ - ಸಲಾತೀನ' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೩. ಕೃಷ್ಣ ಕೊಲ್ಹಾರ ಕುಲಕರ್ಣಿ, 'ಬಿಜಾಪುರ ಆದಿಲ್‌ಶಾಹಿ' ಪ್ರಕಾಶಕರು, ಸಿಕ್ಯಾಬ ಆದಿಲ್‌ಶಾಹಿ ಅಧ್ಯಯನ ಸಂಸ್ಥೆ, ನವರಸಪುರ ಮಹಾವಿದ್ಯಾಲಯ ಸಂಕೀರ್ಣ, ಬಾಗಲಕೋಟೆ ರಸ್ತೆ ಬಿಜಾಪುರ, ೨೦೦೨.

೪. ಚೆನ್ನಬಸಪ್ಪ ಎಸ್. ಪಾಟೀಲ, 'ಬಿಜಾಪುರದ ತೋಪುಗಳು', ಇತಿಹಾಸ ದರ್ಶನ ಸಂಪುಟ-೧೪', ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, ೧೯೯೯

೫. ದಿವಾಕರ ಆರ್.ಆರ್, 'ಕರ್ನಾಟಕದ ಪರಂಪರೆ ಸಂಪುಟ - ೦೨' ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೬. ನಾಗರಾಜ್ ಎಂ.ಜಿ. ಮತ್ತು ಕೃಷ್ಣಮೂರ್ತಿ ಪಿ.ವಿ., (ಸಂ) 'ಇತಿಹಾಸ ದರ್ಶನ ಸಂಪುಟ - ೧೪', ಲಕ್ಷ್ಮಿಮುದ್ರಣಾಲಯ ಚಾಮರಾಜ ಪೇಟೆ, ಬೆಂಗಳೂರು, ೧೯೯೯

೭. ನಾಗರಾಜ್ ಎಂ.ಜಿ. ಮತ್ತು ಕೃಷ್ಣಮೂರ್ತಿ ಪಿ.ವಿ., 'ಇತಿಹಾಸ ದರ್ಶನ ಸಂಪುಟ - ೧೯', ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, ೨೦೦೪

೮. ನಾಗರಾಜ್ ಎಂ.ಜಿ. ಮತ್ತು ಕೃಷ್ಣಮೂರ್ತಿ ಪಿ.ವಿ., 'ಇತಿಹಾಸ ದರ್ಶನ ಸಂಪುಟ - ೨೦', ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, ೨೦೦೫

೯. ಮಜುಂದಾರ್ ಆರ್.ಸಿ., 'ದೆಹಲಿ ಸುಲ್ತಾನರ ಆದಿಪತ್ಯ ಭಾಗ - ೧' ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧

೧೦. ಮಜುಂದಾರ್ ಆರ್.ಸಿ., 'ಮೊಗಲ ಸಾಮ್ರಾಜ್ಯ, ಭಾಗ - ೨', ಭಾರತೀಯ ವಿದ್ಯಾಭವನ, ಬೆಂಗಳೂರು ೨೦೦೩

೧೧. ಮುನಿಸ್ವಾಮಿ ಆರ್., (ಮುಖ್ಯ ಸಂಪಾದಕರು), ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಬಿಜಾಪುರ ಜಿಲ್ಲೆ' ಬೆಂಗಳೂರು, ೧೯೯೯

೧೨. ಮುದ್ದಾಚಾರ್ ಬಿ., 'ಮೊಗಲರ ಇಂಡಿಯಾ' ಮುದ್ರಣ ಶ್ರೀ ಲಕ್ಷ್ಮೀನರಸಿಂಹ ಪ್ರೆಸ್, ಶ್ರೀಗಣಪತಿ ಸಚ್ಚಿದಾನಂದ ಆಶ್ರಮ, ಮೈಸೂರು ೧೯೮೧

೧೩. ಮೊರ್ ಲ್ಯಾಂಡ್, (ಅನು), ಈಶ್ವರ ಚಂದ್ರ, 'ಅಕ್ಬರನಿಂದ ಔರಂಗಜೇಬನವರೆಗೆ' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು - ೧೯೮೫

೧೪. ಮೈತ್ರಿ ಕೆ.ಎಂ., 'ಸುಲ್ತಾನ ಸುರಳಿ' ಮೈತ್ರಿ ಪ್ರಕಾಶನ ೧೨೪ ಎಲ್.ಐ.ಟಿ ಕಾಲೋನಿ, ಬೀದರ ೧೯೯೪

೧೫. ರಾಬರ್ಟ್ ಸಿವೆಲ್, (ಅನು), ಸದಾನಂದ ಕನವಳ್ಳಿ, 'ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೦

೧೬. ವೆಂಕಟಸುಬ್ಬಯ್ಯ ಹೆಚ್.ಪಿ., 'ವೀರ ರಾಣಿ ಚಾಂದ್‌ಬೀಬಿ' ರವಿಚಂದ್ರ ಪ್ರಕಾಶನ ವಿಶ್ವೇಶ್ವರನಗರ ಮೈಸೂರು, ೨೦೦೧

೧೭. ಷೇಕ್ ಅಲಿ ಬಿ., 'ಕರ್ನಾಟಕ ಚರಿತ್ರೆ, ಸಂಪುಟ-೪', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೧೮. ಷೇಕ್ ಅಲಿ ಬಿ., ಮತ್ತು ರಂಗಸ್ವಾಮಯ್ಯ ಜಿ.ಆರ್., 'ದಕ್ಷಿಣ ಭಾರತದ ಇತಿಹಾಸ', ಚೇತನ ಬುಕ್ ಹೌಸ್ ೫೮೧೭ ಅಕ್ಕಮಹಾದೇವಿ ರಸ್ತೆ ದಾವಣಗೆರೆ, ೨೦೦೧

೧೯. ಸ್ಮಿತ್ ವಿ.ಎ., ಸಿ.ಐ.ಈ (ಅನು), ರಾಮಸ್ವಾಮಿ ಎಮ್. ಎ., 'ಇಂಡಿಯಾ ದೇಶದ ಚರಿತ್ರೆ', ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್ ಬೊಂಬಾಯಿ, ಕಲ್ಕತ್ತಾ, ಮದ್ರಾಸ್, ೧೯೪೦


* * *



ಪರ್ಶಿಯನ್ ಚಿತ್ರ ಕಲಾವಿದನ ಕಲ್ಪನೆಯಲ್ಲಿ ಚಾಂದ್‌ಬೀಬಿ



ಚಾಂದ್‌ಬೀಬಿ ಕುದುರೆ ಸವಾರಿಯಲ್ಲಿ ತಲ್ಲೀನಳಾಗಿರುವ ಸಂದರ್ಭ



ರಾಜಕೀಯ ಸ್ಥಿತ್ಯಂತರಗಳ ಬಗ್ಗೆ ಆಲೋಚನೆಯಲ್ಲಿ ತಲ್ಲೀನಳಾಗಿರುವ ಚಾಂದ್‌ಬೀಬಿ



ಚಾಂದ್‌ಬೀಬಿಯು, ಬಿಜಾಪುರದಲ್ಲಿ ತನ್ನ ಅಧಿಕಾರ ಕುಂಠಿತಗೊಂಡಾಗ ತನ್ನ ಸಂಗಡಿಗರೊಂದಿಗೆ ಬಿಜಾಪುರದಿಂದ ಅಹಮದನಗರಕ್ಕೆ ಪ್ರಯಾಣ ಬೆಳೆಸುತ್ತಿರುವುದು,




ಚಾಂದ್‌ಬೀಬಿಯು ತನ್ನ ಸೈನಿಕರನ್ನು ಯುದ್ಧಕ್ಕೆ ಹುರಿದುಂಬಿಸುತ್ತಿರುವುದು



ಚಾಂದ್‌ಬೀಬಿಯು ಮೊಗಲ್ ದೊರೆ ಮುರಾದನೊಂದಿಗೆ ಶಾಂತಿಸಂಧಾನ
ಏರ್ಪಡಿಸುವ ಸಂದರ್ಭ



ಅಲಿ ಆದಿಲ್ ಷಾಹ ಚಾಂದ್‌ಬೀಬಿಯ ಸವಿನೆನಪಿಗಾಗಿ ಈ ಬಾವಿಯನ್ನು ಕಟ್ಟಿಸಿದ ಈ ಬಾವಿಯನ್ನು ಚಂದಾಬಾವ್‌ಡಿ ಎಂದು ಕರೆಯಲಾಗಿದೆ,



ಚಾಂದ್‌ಬೀಬಿ ಸುಲ್ತಾನಳ ಸಮಾಧಿ ಸ್ಥಳ ಅಹಮದನಗರ,